ಶ್ರೀಃ





ಶ್ರೀಮತೇ ರಾಮಾನುಜಾಯ ನಮಃ

ಪ್ರಪನ್ನನಿಗೆ ಅವಶ್ಯಾನುಸಂಧೇಯವಾಗಿಯೂ, ವೈದಿಕವಾಗಿಯೂ,
ಪೌರುಷೇಯವಾಗಿಯೂ ಆಗಿ ಮಂತ್ರರತ್ನಕ್ಕೆ ಮಾಲಾಮಂತ್ರ
ರೂಪವಾಗಿರುವ

# ವಾಕ್ಯಗುರುಪರಂಪರೆಯೂ ಅದರ ವ್ಯಾಖ್ಯಾನವೂ

## ೧. ಆಚಾರ್ಯನಿರ್ಣಯವೂ

## ೨. ದೇವತೆಗಳಿಗೂ, ಋಷಿಗಳಿಗೂ ಪಂಚಸಂಸ್ಕಾರಗಳಾಗಿವೆಯೆ ?

ಪ್ರಕಾಶಕರು.

ಶ್ರೀಮತ್ಪರಮಹಂಸೇತ್ಯಾದಿ ಶ್ರೀಯದುಗಿರಿ ಯತಿರಾಜಮಠ ಜೀಯರು
ಸ್ವಾಮಿಗಳವರ ಅಖಿಲಶಿಷ್ಯರಪರವಾಗಿ, ಶಿಷ್ಯರಾದ

**ಆಸೂರಿ ಸಂಪತ್ಕುಮಾರಾಚಾರ್ಯರು**

**ಆಸೂರಿ ಶ್ರೀನಿವಾಸಯ್ಯಂಗಾರ್ಯರು**

ಮನ್ಮಥ ಸಂ—ಶಕಂ—೧೮೭೭

೧೯೫೫

ಶ್ರೀಃ



ಶ್ರೀಮತೇ ರಾಮಾನುಜಾಯ ನಮಃ

ಪ್ರಪನ್ನನಿಗೆ ಅವಶ್ಯಾನುಸಂಧೇಯವಾಗಿಯೂ, ವೈದಿಕವಾಗಿಯೂ,
ಪೌರುಷೇಯವಾಗಿಯೂ ಆಗಿ ಮನ್ತ್ರರತ್ನಕ್ಕೆ ಮಾಲಾಮನ್ತ್ರ
ರೂಪವಾಗಿರುವ

# ವಾಕ್ಯಗುರುಪರಂಪರೆಯೂ ಅದರ ವ್ಯಾಖ್ಯಾನವೂ

## ೧. ಆಚಾರ್ಯನಿರ್ಣಯವೂ

## ೨. ದೇವತೆಗಳಿಗೂ, ಋಷಿಗಳಿಗೂ ಪಂಚಸಂಸ್ಕಾರಗಳಾಗಿವೆಯೆ ?

**ಪ್ರಕಾಶಕರು.**
ಶ್ರೀಮತ್ಪರಮಹಂಸೇತ್ಯಾದಿ ಶ್ರೀಯದುಗಿರಿ ಯತಿರಾಜಮಠ ಜೀಯರು
ಸ್ವಾಮಿಗಳವರ ಅಖಿಲಶಿಷ್ಯರಪರವಾಗಿ, ಶಿಷ್ಯರಾದ
**ಆಸೂರಿ ಸಂಪತ್ಕುಮಾರಾಚಾರ್ಯರು**
**ಆಸೂರಿ ಶ್ರೀನಿವಾಸಯ್ಯಂಗಾರ್ಯರು**

ಮನ್ಮಥ ಸಂ—ಶಕಂ—೧೮೭೮

೧೯೫೫

# ವಿಜ್ಞಾಪನೆ

ಪೂರ್ವಾಚಾರ್ಯರಿಂದ ಬರೆಯಲ್ಪಟ್ಟ ಈ ವಾಕ್ಯಗುರುಪರಂಪರಾ ವ್ಯಾಖ್ಯಾನವನ್ನು ಮೊದಲು ಮದರಾಸಿನಲ್ಲಿ ಶ್ರೀಮಾನ್ ಯೋಗಿ ಪಾರ್ಥ ಸಾರಥಿಅಯ್ಯಂಗಾರ್ಯರು ೧೮೮೪ ನೇ ಇಸವಿಯಲ್ಲಿ ಮುದ್ರಿಸಿ ಪ್ರಕಾಶಪಡಿಸಿದರು. ಈಗ ಅದರೊಂದಿಗೆ ಆಚಾರ್ಯನಿರ್ಣಯವನ್ನೂ ಮತ್ತು ಋಷಿಗಳಿಗೂ ದೇವತೆಗಳಿಗೂ ಪಂಚಸಂಸ್ಕಾರವಾಗಿವೆಯೆ ? ಎನ್ನುವುದಕ್ಕೆ ಪ್ರಮಾಣವನ್ನೂ ಸೇರಿಸಿರುವುದು. ಅಲ್ಲದೆ ಈ ಗ್ರಂಥವನ್ನು ಮುದ್ರಿಸಲು ಮೂಲಕಾರಣವಾಗಿ ಪ್ರಕೃತ ಸಾಂಪ್ರದಾಯಿಕ ವಿಷಯದಲ್ಲಿ ಉಂಟಾದ ಕೆಲವು ಪ್ರಶ್ನೆಗಳಿಗೆ ಹಿರಿಯರಿಂದ ಶಿಷ್ಟಾಚಾರವನ್ನು ಕೇಳಿ ತಿಳಿದು ಅದನ್ನು ಪ್ರಶ್ನೋತ್ತರಗಳ ರೂಪವಾಗಿ ವಿವರಿಸಿರುವುದು.

ಯಾವ ಮಂತ್ರವನ್ನು ಉಚ್ಚರಿಸಬೇಕಾದರೂ ಈ ವಾಕ್ಯಗುರು ಪರಂಪರೆಯನ್ನು ಅನುಸಂಧಿಸಿದನಂತರವೇ ಮಂತ್ರವನ್ನು ಉಚ್ಚರಿಸ ಬೇಕೆಂದು ನಿಯಮವು. ಇದರಿಂದ ಗುರುಪರಂಪರೆಯು ಎಷ್ಟು ಶ್ರೇಷ್ಠ ವೆಂಬುದನ್ನು ಹೇಳಬೇಕೆ ?

ಈ ಗ್ರಂಥವು ಶ್ರೀವಚನಭೂಷಣ, ಮಹಾಭಾರತ, ಧರ್ಮಶಾಸ್ತ್ರ ಮತ್ತು ಪಂಚರಾತ್ರ ಸಂಹಿತಾ ಈ ಗ್ರಂಥಗಳಿಂದ ಪ್ರಮಾಣವನ್ನು ಸ್ವೀಕರಿಸಿರುವುದು.

ಈ ಗ್ರಂಥವಲ್ಲದೆ ಅನೇಕ ವಿಚಾರಗಳು ಪೂರ್ವಾಚಾರ್ಯರುಗಳಿಂದ ಸಪ್ರಮಾಣದೊಂದಿಗೆ ಸಂಗ್ರಹಿಸಲ್ಪಟ್ಟು ವಿಜ್ಞಾನರೀತಿಯಲ್ಲಿ ಬರೆದು ಸಿದ್ಧ ಮಾಡಲ್ಪಟ್ಟಿರುವ ಶಾಸ್ತ್ರ ಸಂಪ್ರದಾಯದ ಅನೇಕ ಗ್ರಂಥಗಳು ಈಗ ನಮಗೆ ದೊರಕಿರುತ್ತವೆ. ಆಸ್ತಿಕ ಮಹಾಜನರ ಪ್ರೋತ್ಸಾಹದ ಮೇಲೆ ಒಂದಾಗುತಲೊಂದು ಗ್ರಂಥವನ್ನು ಪ್ರಕಾಶಪಡಿಸಲು ಉದ್ದೇಶಿಸಿರುತ್ತೇವೆ.

ಪ್ರಕೃತ ಈ ಗ್ರಂಥವನ್ನು ಓದಿ ವಿಷಯವನ್ನು ತಿಳಿಯುವುದರಿಂದ "ಆಚಾರಃ ಪ್ರಥಮೋ ಧರ್ಮಃ" ಎಂದೂ "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋಭಯಾವಹಃ" ಎಂದೂ ತಿಳಿದುಕೊಂಡು ನಾವು ಯಾವ ರೀತಿ

ನಡೆದುಕೊಳ್ಳಬೇಕು? ನಮಗೇನು ಆವಶ್ಯಕತೆ? ಎನ್ನುವುದನ್ನೂ ತಿಳಿಯಬಹುದು. ಹೀಗೆ ತಿಳಿದಮೇಲೆ ನಮ್ಮ ಮತ, ನಮ್ಮ ಆಚಾರ, ನಮ್ಮ ಗುರುಗಳು ಎನ್ನುವ ಅಭಿಮಾನದಿಂದಲೂ ಅನುಷ್ಠಾನದಿಂದಲೂ ನಡೆದು ಇಹಪರ ಶ್ರೇಯೋಭಾಗಿಗಳಾಗುವರೆಂದು ನಂಬಿದೆ.

ಇದರಿಂದ ಈ ಗ್ರಂಥವನ್ನು ಮುದ್ರಿಸಿದ ನಾವು ನಮ್ಮ ಕರ್ತವ್ಯವನ್ನು ಪಾಲಿಸಿದಂತಾಗಿ ಧನ್ಯರಾಗುವೆವು.

ಇದಕ್ಕೆ ಉದಾಹರಣೆಯಾಗಿ ನಮ್ಮ ಪಿತೃವರ್ಯರು ಮೇಲುಕೋಟೆ ಶ್ರೀಯತಿರಾಜಮಠಕ್ಕೆ ಶಿಷ್ಯರಾಗಿಯೂ ಕಾಲವನ್ನನುಸರಿಸಿ ಆ ಮಠದಲ್ಲೇ ಪೀಠಾಧಿಪತಿಗಳಾಗಿ ಗುರುಗಳಾಗಿಯೂ ಇದ್ದು ಅನೇಕವಾಗಿ ವೇದಾಂತ, ಕಾವ್ಯ, ನಾಟಕ ಪಾಂಚರಾತ್ರ ಆಗಮಾದಿ ಗ್ರಂಥಗಳನ್ನು ಶೋಧಿಸಿ ಮುದ್ರಿಸಿ ಪ್ರಕಾಶಪಡಿಸಿರುವುದು ಸರ್ವರಿಗೂ ವೇದ್ಯವೇ ಆಗಿರುವುದು.

ಈ ಗ್ರಂಥವಿಚಾರದಲ್ಲಿ ಸಂಪ್ರದಾಯಸ್ಥರಾದ ವಿದ್ವಾಂಸರುಗಳು ಪ್ರೀತಿಯಿಂದ ಅನುಗ್ರಹಿಸಿದ ಪತ್ರಿಕೆಯನ್ನೂ ಮುದ್ರಿಸಿದೆ. ಅವರಿಗೆ ನಮ್ಮ ಸಾಷ್ಟಾಂಗನಮಸ್ಕಾರಗಳನ್ನು ಅರ್ಪಿಸುತ್ತೇವೆ.

ಶ್ರೀರಾಮಾನುಜಾಚಾರ್ಯರ ಅವತಾರಾದಿ ೯೩೮ ನೇ ತಿರುನಕ್ಷತ್ರವಾದ ಈದಿನ ಸ್ವಾಚಾರ್ಯರ ಜ್ಞಾಪಕಾರ್ಥದಿಂದ ಅವರ ಪಾದಕಮಲಗಳಲ್ಲಿ ಭಕ್ತಿ ಕೃತಜ್ಞತಾಪುರಸ್ಸರವಾಗಿ ಈ ಗ್ರಂಥವನ್ನು ಅಖಿಲ ಶಿಷ್ಯರ ಪರವಾಗಿ ಸಮರ್ಪಿಸಿ ಪ್ರಕಾಶಪಡಿಸಿರುವೆವು.

| | |
|---|---|
| ತಿರುನಾರಾಯಣಪುರಂ ] ಮೇಲುಕೋಟೆ ] | ಆಸೂರಿ ಸಂಪತ್ಕುಮಾರಾಚಾರ್ಯರು, ಆಸೂರಿ ಶ್ರೀನಿವಾಸಯ್ಯಂಗಾರ್ಯರು. |

ಮನ್ಮಥ ಸಂ||
ಪೌಷ ಆರ್ದ್ರಾ ತೇದಿ ೧೪.

ಬಿ. ಪದ್ಮರಾಜಪಂಡಿತರಿಂದ ಮೈಸೂರು ಶ್ರೀ ಜಯಲಕ್ಷ್ಮೀ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.

ಶ್ರೀಮತ್ಪರಮಹಂಸೇತ್ಯಾದಿ ಶ್ರೀಕಾಂಚೀ ವಾದಿಕೇಸರಿ ಅಳಹಿಯ ಮಣವಾಳ ಜೀಯರ್‌ಸ್ವಾಮಿಗಳವರು

ಶ್ರೀಮಾನ್ ಅಸೂರಿ ಸಂಪತ್ಕುಮಾರಾಚಾರ್ಯರು ಮತ್ತು ಆಸೂರಿ ಶ್ರೀನಿವಾಸಯ್ಯಂಗಾರ್ಯರುಗಳಿಗೆ ಮಂಗಲಾಶಾಸನಗಳು. —

ನೀವುಗಳು ಪ್ರ ಕಾ ಶ ಪ ಡಿ ಸಿ ರು ವ ವಾಕ್ಯಗುರುಪರಂಪರಾ ವ್ಯಾಖ್ಯಾನ ಗ್ರಂಥವನ್ನು ನಾವು ಆಮೂಲಾಗ್ರವಾಗಿ ನೋಡಿದೆವು. ವಿಚಾರಗಳೆಲ್ಲವೂ ಶಾಸ್ತ್ರ ಪ್ರಮಾಣಗಳಿಂದ ಕೂಡಿ ಸಂಪ್ರದಾಯಾನುಸಾರ ವಾಗಿರುತ್ತವೆ. ಚೇತನರು ಜನನ ಮರಣಾದಿ ದುಃಖಗಳಿಂದ ಪಾರಾಗಿ, ಸದಾನಂದವಾಗಿರುವ ಭ ಗ ವಂ ತ ನ ಅಡಿದಾವರೆಗಳನ್ನು ಸೇರಲು ಆಚಾರ್ಯನೂ ಸಹ ಭಗವಂತನಂತೆಯೇ ಆವಶ್ಯಕನೆಂದು ಹೇಳಿರುವುದು ಗುರುಪರಂಪರಾ ಸಂಪ್ರದಾಯಕ್ಕೆ ಸರಿಯಾಗಿರುವುದು.

ಇನ್ನು ಮೂರನೆಯದಾದ ಪಂಚಸಂಸ್ಕಾರದವಿಷಯದಲ್ಲಿ ವಿಷ್ಣು ವಾದರೂ ವೈಷ್ಣವಸಂಬಂಧಿಯಾಗಬೇಕಾಗಿರುವುದರಿಂದ "ನಿಂದನಕ್ಕುಂ ಕುರುಪ್ಪಾಹಿಲ್ ಕರ್ಕಿಲ್ಲಾ ಕವಿಯಿಲ್ ಪೊರುಳ್ ತಾನೇ" ಎಂಬುದಾಗಿ ಭಗವಂತನೂ ಸಹ ಈ ವಾಕ್ಯಗುರುಪರಂಪರೆಯನ್ನು ಅನುಸಂಧಿಸಲೇ ಬೇಕು. ಎಂಬುದಾಗಿ ತಿರುಮಂಗೈಆಳ್ವಾರವರು ಅಪ್ಪಣೆ ಕೊಡಿಸಿರುವರು. ಇದನ್ನನುಸರಿಸಿಯೇ ವಿಷ್ಣುವೂ ಸಹ ಶ್ರೀರಾಮಾನುಜಾಚಾರ್ಯರನ್ನು ಗುರುವಾಗಿ ಎಣಿಸಿ ಅರ್ಚಾವತಾರವನ್ನು ಸ್ವೀಕರಿಸಿದಾಗ ತಿರುಪತಿಯಲ್ಲಿ ಮೊದಲನೆಯದಾದ ಶಂಖಚಕ್ರ ಮುದ್ರಾಧಾರಣೆಯನ್ನೂ ತಿರುಕ್ಕುರುಂ ಗುಡಿಯಲ್ಲಿ ಊರ್ಧ್ವಪುಂಡ್ರ ದಾಸ್ಯನಾಮವನ್ನೂ, ಶ್ರೀರಂಗದಲ್ಲಿ ಮಂತ್ರ ಮತ್ತು ಪ್ರಪತ್ತಿಯನ್ನೂ ಅಂಗೀಕರಿಸಿದನು.

ಈ ರೀತಿಯಲ್ಲಿ ಲೋಕಹಿತಾರ್ಥವಾಗಿ ಏರ್ಪಟ್ಟ ಈ ಗುರುಪರಂಪರಾ ಅರ್ಥವನ್ನು ಎಲ್ಲರೂ ತಿಳಿಯಲು ಇವರುಗಳು ಈ ಗ್ರಂಥವನ್ನು ಪ್ರಕಾಶ ಪಡಿಸಿರುವುದು ಬಹಳ ಶ್ಲಾಘನೀಯವಾಗಿ ಪುಣ್ಯಕರವಾಗಿದೆ. ಲೋಕೋಪ ಕಾರಕವಾಗಿ ಇಂಥ ಸದ್ಗ್ರಂಥಗಳನ್ನು ಇನ್ನೂ ಅನೇಕವಾಗಿ ಬರೆಯಲು ಇವರಿಗೆ ಭಗವಂತನು ಶ ಕ್ತಿ ಯ ನ್ನು ಕೊಡಲೆಂದು ಆಶೀರ್ವದಿಸಿ ಮಾಡುವ ಮಂಗಲಾಶಾಸನಗಳು.

ಶ್ರೀಸಂಪತ್ಕುಮಾರ ರಾಮಾನುಜ ಜೀಯರ್

ಶ್ರೀಮತೇ ರಾಮಾನುಜಾಯ ನಮಃ

ಶ್ರೀ|| ಉ|| ವೇ|| ಆಸೂರಿ ಶ್ರೀನಿವಾಸಯ್ಯಂಗಾರ್ಯರು ಮುದ್ರಿಸಿರುವ ವಾಕ್ಯಗುರುಪರಂಪರಾ ವ್ಯಾಖ್ಯಾನ ಮುಂತಾದ ವಿಷಯತ್ರಯ ಯುಕ್ತ ವಾದ ಈ ಗ್ರಂಥದ ಪ್ರಾಶಸ್ತ್ಯವನ್ನು ಯಥಾರ್ಥವಾಗಿ ವಿವರಿಸಲು ಈದಿನ ನಾನು ಅವಕಾಶ ಪಡೆದಿರುವುದು ಪರಮಭಾಗ್ಯವೆಂದು ಭಾವಿಸು ತಕ್ಕುದಾಗಿದೆ. ಈ ಗ್ರಂಥಾರಂಭದಲ್ಲಿ ಪ್ರತಿಜ್ಞಾತವಾಗಿರುವ ಮೂರು ವಿಷಯಗಳೂ ಅವಯವಶಃ ಸರ್ವಾಂಶದಲ್ಲಿಯೂ ಅಲ್ಲಲ್ಲಿ ಪ್ರಮಾಣ ವಚನ ಗಳಿಂದ ಪರಿಷ್ಕೃತವಾಗಿರುತ್ತವೆ. ಅನೇಕಜನರು ವೈದಿಕ ಸಂಪ್ರದಾಯವು ಹೀಗೆಯೇ ಸರಿಯೆಂದು ಅರಿಯರು. ಆದ್ದರಿಂದಲೇ ವೇದೋದಿತವಾದ ಪರಮವೈದಿಕಸಿದ್ಧಾಂತವನ್ನು ಆದರಿಸುವವರೂ ಬಹಳ ವಿರಳವಾಗಿರು ವರು. ಪ್ರಮಾಣಗ್ರಂಥಗಳನ್ನು ಅನೇಕವಾಗಿ ಭಗವಂತನು ನಮಗೆ ಅನುಗ್ರಹಿಸಿರುತ್ತಾನೆ. ಆದರೂ ಅವುಗಳನ್ನು ನೋಡತಕ್ಕವರಿಗೆ ಅಸೂಯೆ ದ್ವೇಷಾದಿ ದೋಷಗಳಿರಬಾರದು. ಮತ್ತು ಸುಕೃತ ಪರಿಪಾಕವೂ ಭಗವದನುಗ್ರಹವೂ ಇರಬೇಕು. ಅಂಥ ವೇದಾಂತಾರ್ಥ ನಿಷ್ಣಾತರಲ್ಲಿ ಅಗ್ರಗಣ್ಯರೆಂದರೆ ಈ ಗ್ರಂಥಕಾರರು ಉದಾಹರಿಸಿರುವ ಋಷಿಗಳಿಂದೀಚೆಗೆ ಅವತರಿಸಿರುವ ಆಚಾರ್ಯರುಗಳಲ್ಲಿ —

ಅನಂತಃಪ್ರಥಮಂರೂಪಂ ದ್ವಿತೀಯಂ ಲಕ್ಷ್ಮಣೋಮತಃ
ಬಲಭದ್ರಸ್ತೃತೀಯಂತು ಕಲೌಕಶ್ಚಿದ್ಭವಿಷ್ಯತಿ

ಎಂದು ಸ್ಮೃತಿಸಿದ್ಧರಾದ ಭಗವದ್ರಾಮಾನುಜಾಚಾರ್ಯ ರೊಬ್ಬರೇ ಎಂದು ಧಾರಾಳವಾಗಿ ಹೇಳಬಹುದು.

ಶ್ರೀರಾಮನಲ್ಲಿ ಅಪರಾಧ ಮಾಡಿದ ಸುಗ್ರೀವನು ತಾರೆಯ —

ಕೃತಾಪರಾಧಸ್ಯ ಹಿತೇನಾನ್ಯಸ್ಯತ್ಪಶ್ಯಾಮ್ಯಹಂಕ್ಷಮಂ
ಅಂತರೇಣಾಂಜಲಿಂಬದ್ಧ್ವಾಲಕ್ಷ್ಮಣಸ್ಯ ಪ್ರಸಾದನಾತ್

ಎಂಬ ಹಿತೋಕ್ತಿಯಿಂದ ಲಕ್ಷ್ಮಣನಲ್ಲಿ ಶರಣಾಗತಿ ಮಾಡಿ ಶ್ರೀರಾಮ ಕೋಪದಿಂದ ಪಾರಾದನು. ಕೋಟಿ ಜನ್ಮಗಳಿಂದ ಅಪರಾಧ ಮಾಡಿದ ನಮಗಾದರೂ ಆಳ್ವಾರ್ ಮತ್ತು ಎಂಬೆರುಮಾನಾರ್ರವರ ಶರಣಾಗತಿಯೇ ಉತ್ತಾರಕವೆಂದೂ ಇದು ಎಂದಿಗೂ ನಿಷ್ಫಲವಾಗುವುದಿಲ್ಲವೆಂದೂ ಅಭಿಜ್ಞರಾದ ಶ್ರೀಪರಾಶರಭಟ್ಟಾರಕರು ಅಪ್ಪಣೆಕೊಡಿಸಿರುತ್ತಾರೆ.

ಇಂಥಹ ವಿಲಕ್ಷಣಾಚಾರ್ಯ ಪರಂಪರೆಯ ವ್ಯಾಖ್ಯಾನ ಸ್ವರೂಪಭೇದ ಮತ್ತು ಪ್ರಾಚೀನ ಋಷಿಕುಲದ ಸಂಪ್ರದಾಯ ಇವುಗಳು ಈ ಗ್ರಂಥದಿಂದ ಸರ್ವಜನ ವೇದ್ಯವಾಗುವುದು. ಈ ಗ್ರಂಥ ಕಾರರ ಪ್ರೀತಿಕಾರಿತ ಆಚಾರ್ಯಕೈಂಕರ್ಯವಾಗಿಯೂ ಸರ್ವರಿಗೂ ಅಪ್ರತಿಪತ್ತಿ ಅನ್ಯಥಾಪ್ರತಿಪತ್ತಿ ವಿಪ್ರತಿಪತ್ತಿಗಳನ್ನು ಪರಿಹರಿಸುವುದರಿಂದ ಬಹುಮಟ್ಟಿಗೆ ಲೋಕೋಪಕಾರಕವಾಗಿಯೂ ನಾವು ವಿಶೇಷ ಗಮನಕ್ಕೆ ತೆಗೆದುಕೊಳ್ಳಬೇಕಾಗಿದೆ.

ಇತರ ಸಂಪ್ರದಾಯಗಳೆಲ್ಲವೂ ಒಬ್ಬೊಬ್ಬ ಪ್ರಾಕೃತ ಪುರುಷರ ಮತವಾಗಿರುವುದು. ಶ್ರೀಪರಮವೈದಿಕ ಸಿದ್ಧಾಂತವೆಂಬ ವಿಶಿಷ್ಟಾದ್ವೈತ ಸಂಪ್ರದಾಯವಾದರೋ ಸೃಷ್ಟ್ಯಾದಿಯಿಂದಲೇ ವೇದಾಧಿಗತಾರ್ಥವಾಗಿ ಭಗವಂತನಿಂದಲೇ ಪ್ರವರ್ತಿತವಾಗಿ ಗುರುಪರಂಪರೆಯಿಂದ ವಿಶದವಾಗಿ ನಡೆದು ಬರುತ್ತಿರುವುದು. ಇದನ್ನು ದರ್ಶನಪ್ರವರ್ತಕರೆಂದು ಬಿರುದು ಪಡೆದಿರುವ ಆಳ್ವಾರಾಚಾರ್ಯರುಗಳು ವ್ಯಕ್ತಪಡಿಸಿರುತ್ತಾರೆಯೇ ಹೊರತು ಈ ದರ್ಶನದಲ್ಲಿ ಅವರು ಸ್ವಕಪೋಲಕಲ್ಪಿತವಾಗಿ ಸೃಷ್ಟಿಮಾಡಿರುವ ಅರ್ಥವಾವುದೂ ಇಲ್ಲ. ಆದುದರಿಂದ ಈ ಸಂಪ್ರದಾಯವನ್ನು ರಾಮಾನುಜದರ್ಶನವೆಂದೂ ಔಪನಿಷದ ಸಿದ್ಧಾಂತವೆಂದೂ ಎಲ್ಲರೂ ವ್ಯವಹರಿಸುತ್ತಿದಾರೆಯೇ ಪರಂತು ಇದು ಒಬ್ಬರ ಮತವೆಂದು ತಿಳಿದವರು ವ್ಯವಹರಿಸುತ್ತಿರುವುದಿಲ್ಲ.

ಇಂಥಹ ಸಂಪ್ರದಾಯ ವಿಶದೀಕರಣವು ನಿಶ್ಚಿತವಾಗಿಯೂ ಶ್ಲಾಘ್ಯವಾಗಿಯೇ ಇರುವುದು. ಈ ಸಂಪ್ರದಾಯದಲ್ಲಿರುವ ಪಾರಿ

ಶುದ್ಧ್ಯವನ್ನು ಈ ಗ್ರಂಥಕಾರರು ಚೆನ್ನಾಗಿ ಮಂದಟ್ಟುಮಾಡಿ ವ್ಯಕ್ತಿಶಃ ಕೆಲವುಕಡೆ ವೇಷ, ಭಾಷಾ, ಭೂಷಾ, ಅಶನ, ವಸನ, ಸಹವಾಸ, ವೃತ್ತಿ ವಿಪರ್ಯಯಗಳನ್ನು ನೋಡಿ ತಮ್ಮ ಅನುತಾಪವನ್ನೂ ತೋರಿಸಿರುತ್ತಾರೆ. ಹೃದಯ ಶುದ್ಧವಾಗಿದೆಯೆಂದು ಬಾಯಲ್ಲಿ ಅಂದುಕೊಂಡು ದುರಾಚಾರವನ್ನೇ ಸಂಪ್ರದಾಯದಲ್ಲಿ ಒಳಬೆರಸುವುದು "ಆಚಾರಹೀನಂ ನಪುನಂತಿವೇದಾಃ" ಎಂಬ ವಚನದಿಂದ ಬಹಿಷ್ಕೃತವಾಗಿರುವುದು. ಎಲ್ಲರೂ ಒಳಗೂ ಹೊರಗೂ ಎರಡು ಕಡೆಯೂ ಪರಿಶುದ್ಧರಾಗಿದ್ದು ಈ ಸಂಪ್ರದಾಯವನ್ನು ಕಾಪಾಡಿಕೊಂಡು ಇಂಥಹ ವಿಲಕ್ಷಣ ಗುರುಪರಂಪರೆಯ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಇವರ ಅಭಿಪ್ರಾಯ. ಯಾವ ನ್ಯೂನಾತಿರೇಕಗಳೂ ಇಲ್ಲದ ಈ ಗ್ರಂಥದಿಂದ ನಾನು ಜಗನ್ಮಂಗಳವನ್ನೂ ವಕ್ತೃ ಶುಭೋದರ್ಕವನ್ನೂ ಆಶಿಸುತ್ತೇನೆ.

ಸಾಹಿತ್ಯ ವೇದಾಂತ ವಿದ್ವಾನ್,
ಗೋ. ತಿರುನಾರಣಯ್ಯಂಗಾರ್ಯಃ
ಪ್ರಿನ್ಸಿಪಾಲ್ ಸಂಸ್ಕೃತ ಕಾಲೇಜು,
ಮೇಲುಕೋಟೆ.

ಶ್ರೀಮತೇ ರಾಮಾನುಜಾಯ ನಮಃ

ನಮ್ಮ ಪರಮ ಮಿತ್ರರಾದ ಆಸೂರಿ ಸಂಪತ್ಕುಮಾರಾಚಾರ್ಯರು ಆಸೂರಿ ಶ್ರೀನಿವಾಸಯ್ಯಂಗಾರ್ಯರವರೂ

"ಯೇ ಕಂಠಲಗ್ನತುಲಸೀನಲಿನಾಕ್ಷಮಾಲಾ
ಯೇ ವಾ ಲಲಾಟಫಲಕೇ ಕಲಿತೋರ್ಧ್ವಪುಂಡ್ರಾಃ
ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾ
ಸ್ತೇವೈಷ್ಣವಾಭುವನನಾಶು ಪವಿತ್ರಯನ್ತಿ
ಅತಪ್ತತನೂರ್ನತದಾಮೋಅಶ್ನುತೇ"

"ತಾಪಃ ಪುಂಡ್ರಸ್ತಥಾ ನಾಮ ಮಂತ್ರೋಯಾಗಸ್ತು ಪಂಚಮಃ" ||

ಇತ್ಯಾದಿ ಶ್ರುತಿ ಸ್ಮೃತ್ಯಾಗಮ ಶಾಸ್ತ್ರಸಿದ್ಧವಾದ ತಪ್ತ ಚಕ್ರಾಂಕನವು ಅನಾದಿಸಿದ್ಧವೋ ? ಆಧುನಿಕವೋ ? ಎಂದು ಚರ್ಚಿಸಿ—

"ವಾಸುದೇವಸ್ಸ್ವಯಂ ಪೂರ್ವಂ ಶ್ರೀಭೂಮಿನೀಳಾದಿಕಾ ಸ್ತಥಾ
ಶಂಖಚಕ್ರಾಂಕನಂ ಕೃತ್ವಾ ಪ್ರಣವಂ ಸಂಪ್ರದಾಯ ಚ
ಭಗವಾನಪಿ ವಿಶ್ವಾತ್ಮಾ ಬ್ರಹ್ಮಾಣಂ ಭಕ್ತವತ್ಸಲಃ
ಅಂಕಯ್ಯ ಶಂಖಚಕ್ರಾಭ್ಯಾಂ ತತ್ಪುತ್ರಂ ಚ ತದಂಶಜಂ
ನೃಸಿಂಹೋ ಭಗವಾನ್ ಬ್ರಹ್ಮನ್ನಂತರ್ಯಾಮೀ ನೃಕೇಸರೀ
ಪ್ರಹ್ಲಾದಾಯ ಸ್ವಭಕ್ತಾಯ ಪ್ರಪನ್ನಾಯ ಮುಮುಕ್ಷವೇ
ತಪ್ತಚಕ್ರಾಂಕನಂ ಕೃತ್ವಾ ತನ್ಮಂತ್ರಂ ಪ್ರದದೌ ಪುನಃ"

ಇತ್ಯಾದಿ ಸಂಹಿತಾ ಪ್ರಮಾಣಗಳಿಂದ ಶ್ರೀ ಭೂಮಿ ನೀಳಾ ಚತುರ್ಮುಖ ನಾರದ ಪ್ರಹ್ಲಾದ ವಸಿಷ್ಠಾದಿ ಮಹರ್ಷಿಗಳಿಂದ ಅಸ್ಮದಾಚಾರ್ಯ ಪರಂಪರೆಯಿಂದಲೂ ನಮ್ಮಗಳವರೆಗೆ ಅನಾದಿ ಅನೂಚಾನವಾಗಿ ಬಂದ ಸಂಪ್ರದಾಯವಿದೆಂದೂ,

"ವಿಷ್ಣೋರರ್ಚಾವತಾರೇಷು ಲೋಹಭಾವಂ ಕರೋತಿ ಯಃ
ಯೋ ಗುರೌ ಮಾನುಷಂ ಭಾವಂ ಉಭೌ ನರಕಪಾತಿನೌ"

ಅರ್ಚ್ಯೇವಿಷ್ಣೌ ಶಿಲಾಧೀರ್ಗುರುಷು ನರಮತಿರ್ವಿಷ್ಣೋರ್ವಾ
ವೈಷ್ಣವಾನಾಂ ಕಲಿಮಲಮಥನೇ ಪಾದತೀರ್ಥೇಂಬುಬುದ್ಧಿ

ಸಿದ್ಧೇ ತನ್ನಾಮಮಂತ್ರೇ ಸಕಲಕಲುಷಹೇ ಶಬ್ದಸಾಮಾನ್ಯಬದ್ಧಿ
ಶ್ರೀಶೇ ಸರ್ವೇಶ್ವರೇಶೇ ತದಿತರಸಮಧೀರ್ಯಸ್ಯವಾನಾರಕೀ ಸಃ

ಎಂಬ ಪ್ರಮಾಣಪ್ರಸಿದ್ಧರಾದ ಆಚಾರ್ಯರ ಅವತಾರ ಕಾರಣ ಅವರಿಂದಾಗುವ ಉಪಕಾರ ಆಚಾರ್ಯರ ಪರಂಪರಾ ಕ್ರಮಾನುಸಂಧಾನ "ದೇವಮಿವಾಚಾರ್ಯಮುಪಾಸೀತ" ಎಂಬಂತೆ ಉಪಾಸನಾಕ್ರಮ ಇವುಗಳನ್ನು ಉಪಪಾದಿಸುವ ಈ ವಾಕ್ಯಗುರುಪರಂಪರಾ ಮತ್ತು ಅದರ ವ್ಯಾಖ್ಯಾನವೂ ಎಂದು ಪ್ರಚುರಪಡಿಸಿರುವುದು ಈಗಿನ ಕಾಲದ ಇತರ ಮತಸ್ಥರೂ, ಆಧುನಿಕ ವೈಷ್ಣವರಾದ ನಮ್ಮ ಬಾಲಕರೂ ಈ ನಮ್ಮ ಸಂಪ್ರದಾಯವು "ಅಂಧೇನೈವ ನೀಯಮಾನಾ ಯಥಾಂಧಾಃ," ಕುರುಡನು ಕುರುಡನ ಕೈಯನ್ನು ಹಿಡಿದುಕೊಂಡು ಹೋಗುವಂತೆಯೆಂದು ಎನ್ನದಿರುವಹಾಗೆ ಲೋಕಮಾತೆಯಾದ ಶ್ರೀ ಮೊದಲುಗೊಂಡು ನಮ್ಮವರೆಗೂ ಬಂದಿರುವ ಅನೂಚಾನವೆಂದು ತಿಳಿಯುವಂತೆ ಪ್ರಚುರ ಪಡಿಸಿ ಲೋಕೋಪಕಾರ ಮಾಡಿರುವಕಾರಣ ಇವರಿಗೆ ಸರ್ವಾಂತರ್ಯಾಮಿ ನಾರಾಯಣನು ಸಮಸ್ತ ಸನ್ಮಂಗಳವನ್ನು ನೀಡಿ ಈ ಗ್ರಂಥವನ್ನು ಸರ್ವರೂ ಆದರಿಸಿ ನೋಡತಕ್ಕದೆಂದು ಸತ್ಸಂಪ್ರದಾಯಸ್ಥರಲ್ಲಿ ವಿಜ್ಞಾಪಿಸಿ ಸಂತೋಷದಿಂದ ಅಭಿನಂದಿಸುತ್ತೇನೆ.

ವ್ಯಾಕರಣ ವೇದಾಂತಾಗಮ ವಿದ್ವಾನ್
ಕೆ. ಚಕ್ರವರ್ತಿ ತಿರುಮಲಾಚಾರ್ಯಃ
ಆಸ್ಥಾನ ಮಹಾವಿದ್ವಾಂಸರು

ಮೈಸೂರು
೨೭-೩-೧೯೫೫

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

# ವಾಕ್ಯ ಗುರುಪರಂಪರಾ ವ್ಯಾಖ್ಯಾನವು.



ಶ್ರಿಯಃಪತಿಯಾದ ಕೃಪಾಪರತಂತ್ರನಾಗಿರುವ ಸರ್ವೇಶ್ವರನು ಅಚಿತ್ಕಲ್ಪರಾಗಿ ಬಿದ್ದಿದ್ದ ಚೇತನರಿಗೆ ಕರಣಕಳೇಬರಗಳನ್ನು ದಾನಮಾಡಿ ಅಜ್ಞಾನವೆಂಬ ಕತ್ತಲೆಯನ್ನು ನೀಗಿಸಿ ಒಳ್ಳೆಯದು ಕೆಟ್ಟದು ಎಂಬ ವಿವೇಕವುಂಟಾಗುವುದಕ್ಕೋಸ್ಕರ ಶಾಸ್ತ್ರವೆಂಬ ಬೆಳಕನ್ನು ಕೊಟ್ಟರೂ ಕಾರ್ಯಕರವಾಗದಿರುವುದನ್ನು ಕಂಡು ರಾಮಕೃಷ್ಣಾದ್ಯವತಾರಗಳನ್ನು ಮಾಡಿ ತನ್ನ ಉಪದೇಶದಿಂದಲೂ ನಡವಳಿಕೆಯಿಂದಲೂ ಮನಸೋತು ತನ್ನನ್ನುಹೊಂದಿ ಬಾಳತಕ್ಕ ರೀತಿಗಳನ್ನು ತೋರಿಸಿ ಅನುಗ್ರಹಿಸಿದನು. ಅದೂ ಕೆಲವರಿಗೆ ಕಾಲದೇಶಾದಿಗಳಿಂದ ಸಿಕ್ಕದೆಯೂ ಮತ್ತೆ ಕೆಲವರಿಗೆ ಪ್ರಾಕೃತ ಸಂಬಂಧ ವಿಶೇಷದಿಂದುಂಟಾದ ಅನಾದರಣೆಯಿಂದಲೂ ಇನ್ನು ಕೆಲವರಿಗೆ ಅಜ್ಞಾನದಿಂದಲೂ ಬೇರೆವಿಧವಾದ ಭಾವನೆಯುಂಟಾಗಿ ಪ್ರಯೋಜನವಾಗದೇ ಹೋಯಿತು.

ಇದನ್ನು ನೋಡಿ ತಾನು ಎಲ್ಲಾ ಕಡೆಗಳಲ್ಲಿಯೂ ಅಂತರ್ಯಾಮಿಯಾಗಿ ನಿಂತಿರುವ ನೆಲೆಯನ್ನು ಕಣ್ಣಿಗೆ ತೋರಿಸುವುದಕ್ಕಾಗಿ ಚೇತನರು ಅವರವರ ಇಷ್ಟಬಂದಂತೆ ಆಕಾರವನ್ನೂ ಹೆಸರನ್ನೂ ಕಲ್ಪಿಸಿಕೊಂಡು ಮಾಡುವ (ಸ್ವಾರ್ಥಪ್ರವೃತ್ತಿ) ಆದರ ಅನಾದರ ರೂಪವಾದ ನಡತೆಗಳನ್ನೇ ನೆಪಮಾಡಿಕೊಂಡು ಆ ಚೇತನರನ್ನು ಒಪ್ಪಿಕೊಳ್ಳುವುದಕ್ಕೋಸ್ಕರ ಅರ್ಚಾವತಾರವನ್ನು ಅಂಗೀಕರಿಸಿದನು.

ಇದರ ರಹಸ್ಯವನ್ನು ಉಪದೇಶಿಸುವುದಕ್ಕಾಗಿ ನಿತ್ಯಸೂರಿಗಳನ್ನು ಈ ಲೀಲಾವಿಭೂತಿಯಲ್ಲಿ ಅವತರಿಸುವಂತೆ ಮಾಡಿ, ಅವರ ಮೂಲಕ

ಆಚಾರ್ಯ ಕೃತ್ಯವನ್ನೂ ಪ್ರಕಟವಾಗುವಂತೆ ಮಾಡಿದನು. ಇದರ ಸಾರವನ್ನು ಬಲ್ಲ ನಮ್ಮ ಪೂರ್ವಾಚಾರ್ಯರುಗಳು ಪರಮಪದದಲ್ಲಿರುವ ನಿಲವೆಗೂ ರಾಮಕೃಷ್ಣಾದಿ ವಿಭವಾವತಾರಗಳಲ್ಲಿದ್ದ ನಿಲವೆಗೂ ಈ ಅರ್ಚಾವತಾರದ ನಿಲವೆಗೂ ವ್ಯತ್ಯಾಸವಿಲ್ಲದಂತೆ ಸಾಕ್ಷಾತ್ಕಾರಮಾಡಿ ಅದನ್ನು ನೇರವಾಗಿ ಉಪದೇಶಗಳಿಂದಲೂ, ಪ್ರಬಂಧಗಳಿಂದಲೂ ಚೇತನರ ಉಜ್ಜೀವನಾರ್ಥವಾಗಿ ಪ್ರಕಾಶಪಡಿಸಿಕೊಂಡು ದಿವ್ಯದೇಶದ ದೇವರುಗಳನ್ನು ಬಾಳಿಸಿಕೊಂಡು ಬಂದರು.

ಈ ರೀತಿಯಲ್ಲಿ ಭಗವಂತನಿಗೂ ಚೇತನರಾದ ನಮಗೂ ಸಂಬಂಧವನ್ನು ಕಲ್ಪಿಸುವವನೇ ಆಚಾರ್ಯನು. "ಆಚಾರ್ಯವಾನ್ ಪುರುಷೋವೇದ" ಎಂದು ಶ್ರುತಿಯು. ಆಚಾರ್ಯನ ಕಟಾಕ್ಷಕ್ಕೆ ಪಾತ್ರನಾದವನೇ ಜ್ಞಾನವಂತನಾಗುವನು. ಎಂದು ಶಾಸ್ತ್ರಗಳು ಹೇಳಿವೆ. ಪರಮೋಪಕಾರಕನಾದ ಆಚಾರ್ಯನನ್ನು ಈ ಚೇತನನಾದವನು (ಶಿಷ್ಯರಾದ ನಾವು) "ದೇವಮಿವಾಚಾರ್ಯಮುಪಾಸೀತ" ಎಂಬುದಾಗಿ ಇಷ್ಟದೇವರಂತೆ [ಮನೆದೇವರಂತೆ] ಉಪಾಸಿಸಬೇಕು, ಎಂಬುದಾಗಿ ಶಾಸ್ತ್ರಗಳು ಘೋಷಿಸುತ್ತಿರುವುವು. ಆಚಾರ್ಯನ ಪರಮೋಪಕಾರವನ್ನು ತಿಳಿದವ್ನೇ ಆದರೆ ಈ ಆಚಾರ್ಯನಿಗಿಂತ ದೇವರೂ ಸಹ ಸದೃಶವಾಗಲಾರನೆಂದು ಪೂರ್ವಾಚಾರ್ಯರುಗಳು ಹೇಳಿರುವರು. ಆದ್ದರಿಂದ ಆಚಾರ್ಯನನ್ನು ದೇವರಿಗಿಂತಲೂ ಹೆಚ್ಚೆಂದು ಭಾವಿಸಿ ಧ್ಯಾನ ಸ್ತುತಿ ಪ್ರಣತಿ ಉಪಾಸನೆಗಳಿಂದ ತೃಪ್ತಿ ಹೊಂದಬೇಕು. ಇದರಿಂದ ಆಚಾರ್ಯನೇ ಪರದೇವತೆಯೆಂದೂ ಉಪಾಯೋಪೇಯ ಸ್ವರೂಪನೆಂದೂ ಈ ಆಚಾರ್ಯ ಕೈಂಕರ್ಯವೇ ಪರಮಪುರುಷಾರ್ಥವೆಂದೂ ಇರುವುದರಿಂದ ಆಚಾರ್ಯನನ್ನು ಧ್ಯಾನಿಸಿ ಉಜ್ಜೀವಿಸಬೇಕು.

ಆಚಾರ್ಯನು ಭಗವಂತನ ವಿಭವಸ್ವರೂಪನೆಂದೂ, ವ್ಯೂಹರೂಪನೆಂದೂ ಹೇಳಿರುವುದು. "ಗುರುರೇವ ಪರಂಬ್ರಹ್ಮ ಗುರುರೇವ ಪರಾಗತಿಃ, ಗುರುರೇವ ಪರಾವಿದ್ಯಾ" ಎಂದೂ, "ಗುರು ಬ್ರಹ್ಮ ಗುರು ವಿಷ್ಣು ಗುರುರೇವ

ಮಹೇಶ್ವರಃ'' ಎಂದೂ, "ಅರ್ಚನೀಯಶ್ಚ ವಂದ್ಯಶ್ಚ ಕೀರ್ತನೀಯಶ್ಚ ಸರ್ವದಾ ಧ್ಯಾಯೇಜ್ಜಪೇನ್ನಮೇಭಕ್ತ್ಯಾ ಭಜೇದಭ್ಯರ್ಚಯೇನ್ಮುದಾ" ಎಂದೂ ಶಾಸ್ತ್ರಗಳಲ್ಲಿ ಹೇಳಿರುವುದು.

"ಮಂತ್ರೇ ತದ್ದೇವತಾಯಾಂಚ ತಥಾ ಮಂತ್ರಪ್ರದೇ ಗುರೌ"ಎಂಬುದಾಗಿ ಮಂತ್ರದಲ್ಲೂ, ಅದಕ್ಕೆ ಅಧಿಷ್ಠಾನವಾದ ದೇವತೆಯಲ್ಲೂ ಅದನ್ನು ಉಪದೇಶಿಸಿದ ಗುರುವಿನಲ್ಲೂ ಭಕ್ತಿಯುತರಾಗಿರಬೇಕು. "ಶಿಷ್ಯಪಾಪಂ ಗುರೋರಪಿ" ಎಂದರೆ ಆಚಾರ್ಯನು, ಶಿಷ್ಯನು ಮಾಡಿದ ಪಾಪವನ್ನು ಹೊತ್ತುಕೊಂಡು ದೇವರ ಸಮೀಪದಲ್ಲಿ "ಇವರು ನನ್ನ ಮಕ್ಕಳು, ನಮ್ಮ ಶಿಷ್ಯರು; ಇವರ ತಪ್ಪುಗಳನ್ನು ಕ್ಷಮಿಸಿ ರಕ್ಷಿಸಬೇಕು" ಎಂದು ಪ್ರಾರ್ಥಿಸುವರು. ಎಂದಲ್ಲಿ ಆಚಾರ್ಯನ ಕರುಣೆಯು ಅಪಾರವಾದುದು. ಈ ವಿಚಾರವು ಶ್ರುತಿ, ಸ್ಮೃತಿ ಪಾಂಚರಾತ್ರಾಗಮಗಳಲ್ಲಿ ಪ್ರತಿಪಾದಿತವಾಗಿರುವುದರಿಂದ ಪರಮವೈದಿಕವಾದ ತಾಪಾದಿ ಪಂಚಸಂಸ್ಕಾರಾದಿಗಳನ್ನು ಪ್ರಸಾದಿಸಿದ ಆಚಾರ್ಯನಲ್ಲಿ ಭಕ್ತಿಯುತರಾಗಿರಬೇಕು. ಕೃತಜ್ಞರಾಗಿರಬೇಕು.

ಇಂಥ ಆಚಾರ್ಯನಲ್ಲಿ ಅನ್ಯಥಾಬುದ್ಧಿ ಮಾಡಿದಲ್ಲಿ "ವಿಷ್ಣೋರರ್ಚಾವತಾರೇಷು ಲೋಹಭಾವಂ ಕರೋತಿ ಯಃ| ಯೋ ಗುರೌ ಮಾನುಷಂ ಭಾವಂ ಮುಭೌ ನರಕಪಾತಿನೌ''ಎಂದರೆ ವಿಷ್ಣ್ವಾದಿ ದೇವರ ಅರ್ಚಾ ಮೂರ್ತಿಗಳಲ್ಲಿ ಲೋಹಭಾವವನ್ನೂ ಗುರುವಿನಲ್ಲಿ ಸಾಧಾರಣ ಮನುಷ್ಯ ಭಾವವನ್ನೂ ಮಾಡಿದಲ್ಲಿ ನರಕಭಾಗಿಯಾಗುವನು.

ಪಾಪಿಷ್ಠಃ ಕ್ಷತ್ರಬನ್ಧುಶ್ಚ ಪುಣ್ಡರೀಕಶ್ಚ ಪುಣ್ಯಕೃತ್
ಆಚಾರ್ಯವತ್ತಯಾ ಮುಕ್ತಾ ತಸ್ಮಾದಾಚಾರ್ಯವಾನ್ ಭವೇತ್

ಅನ್ನುವುದರಿಂದ ಪಾಪಿಷ್ಠರಿಗೂ ಪುಣ್ಯವಂತರಿಗೂ ಆಚಾರ್ಯಾಶ್ರಯವು ಅಗತ್ಯವಾಗಿದ್ದೇ ತೀರಬೇಕು. ಆದ್ದರಿಂದಲೇ ತಾನೆಷ್ಟು ಜ್ಞಾನಾಧಿಕನಾದಾಗ್ಯೂ ವರ್ಣಾಶ್ರಮಾಚಾರಾದಿ ನಿಷ್ಠನಾದಾಗ್ಯೂ ಭಕ್ತನಾದಾಗ್ಯೂ ಆಚಾರ್ಯಾಶ್ರಯನಾಗದಿದ್ದರೆ ಭಗವತ್ಕಟಾಕ್ಷವು ಆಗಲಾರದು.

ನಾರಾಯಣೋಪಿ ವಿಕೃತಿಂ ಯಾತಿಗುರೋಃ ಪ್ರಚ್ಯುತಸ್ಯ ದುರ್ಬುದ್ಧೇಃ
ಕಮಲಂ ಜಲಾದಪೇತಂ, ಶೋಷಯತಿ ರವಿ ರ್ನ ತೋಷಯತಿ|"

ಎಂದರೆ ಕಮಲಕ್ಕೆ ಅಧಾರವಾಗಿರುವ ನೀರಿನಿಂದ ಸಂಪರ್ಕವಿಲ್ಲದಂತೆ ಮಾಡಿದರೆ ಕಮಲವನ್ನು ವಿಕಾಸಗೊಳಿಸುವ ಸೂರ್ಯನೇ ಅದನ್ನು ನಾಶಪಡಿಸುವನು. ಅದರಂತೆಯೇ ಆಚಾರ್ಯನ ಕಟಾಕ್ಷವಿಲ್ಲದಿದ್ದರೆ ಭಗವಂತನೂ ಸಹ ಕಟಾಕ್ಷಿಸುವುದಿಲ್ಲವು. ಭಗವಂತನಾದಾಗ್ಯೂ ರಾಮಕೃಷ್ಣಾದ್ಯವತಾರಗಳಲ್ಲಿ ಆಚಾರ್ಯನನ್ನು ಅಂಗೀಕರಿಸಿರುವನು. ಆದ್ದರಿಂದ ಆಚಾರ್ಯನ ಕಟಾಕ್ಷಕ್ಕಾಗಿ ನಾವು ನಮ್ಮ ಕೃತಜ್ಞತೆಯನ್ನು ತೋರ್ಪಡಿಸಬೇಕು. ಇದು ಯಾವರೀತಿಯಲ್ಲಿ ಎಂದರೆ ಆಚಾರ್ಯನು ಉಪದೇಶಿಸಿದ ಮಾರ್ಗದಲ್ಲಿ ನಡೆಯುವುದು, ಆಚಾರ್ಯರ ಜನ್ಮದಿನ (ತಿರುನಕ್ಷತ್ರ) ವನ್ನಾಚರಿಸುವುದು, ಅವರ ಧ್ಯಾನಶ್ಲೋಕವನ್ನು ಹೇಳಿ ಅವರ ಪಾದೋದಕವನ್ನು ಸ್ವೀಕರಿಸುವುದು, ಸಂತೋಷದ ಕೊಂಡಾಟವಾಗಿ ತದೀಯಾರಾಧನೆ (ಅನ್ನದಾನಾದಿಗಳು) ಯನ್ನು ನಡೆಸುವುದು. ಇತ್ಯಾದಿಗಳಿಂದ ನಮ್ಮ ಕೃತಜ್ಞತಾ ಮನೋಭಾವವನ್ನು ತೋರಿಸಬೇಕು.

ಆಚಾರ್ಯನು (ಗುರುಗಳು) ಎನ್ನುವುದು ಹೇಗೆ ಬಂತು? ಇದಕ್ಕೆ ಪ್ರಮಾಣವೇನು? ಆ ಗುರುಗಳಾರು? ಸಂಬಂಧವು ಹೇಗೆ? ಸಂಪ್ರದಾಯ, ಪರಂಪರೆ ಇತ್ಯಾದಿ ಭೇದಗಳೂ ಸಹ ನಮಗೆ ತಿಳಿಯಬೇಕಾಗಿರುವುದು—

ಪ್ರಕೃತ ನಮಗೆ ಉಪದೇಶಮಾಡಿರುವ ಗುರುಗಳು ಎಂದರೆ "ವಾಕ್ಯ ಗುರುಃಪರಂಪರಾ" ಎಂಬುವುದನ್ನು ತಿಳಿಸಿ ಅನಂತರ ಅದರ ಅರ್ಥ ಮತ್ತು ಸಂಬಂಧವನ್ನು ಬರೆಯುತ್ತೇವೆ. ಅನಂತರ ಭಿನ್ನ ಸಂಪ್ರದಾಯ ಮತ್ತು ಪರಂಪರೆ ಇತ್ಯಾದಿಗಳು ಸಂಬಂಧವಿದ್ದೆಡೆಯಲ್ಲಿ ತಿಳಿಸಲಾಗುವುದು.

---

## ವಾಕ್ಯ ಗುರುಪರಂಪರಾ ಮೂಲವು

| | |
|---|---|
| ಅಸ್ಮದ್ಗುರುಭ್ಯೋ ನಮಃ | ೧ |
| ಅಸ್ಮತ್ಪರಮಗುರುಭ್ಯೋ ನಮಃ | ೨ |
| ಅಸ್ಮತ್ಸರ್ವಗುರುಭ್ಯೋ ನಮಃ | ೩ |
| ಶ್ರೀಮತೇ ರಾಮಾನುಜಾಯ ನಮಃ | ೪ |
| ಶ್ರೀಪರಾಂಕುಶದಾಸಾಯ ನಮಃ. | ೫ |
| ಶ್ರೀಮದ್ಯಾಮುನಮುನಯೇ ನಮಃ | ೬ |
| ಶ್ರೀರಾಮಮಿಶ್ರಾಯ ನಮಃ: | ೭ |
| ಶ್ರೀಪುಂಡರೀಕಾಕ್ಷಾಯ ನಮಃ | ೮ |
| ಶ್ರೀಮನ್ನಾಥಮುನಯೇ ನಮಃ | ೯ |
| ಶ್ರೀಮತೇ ಶಠಕೋಪಾಯ ನಮಃ | ೧೦ |
| ಶ್ರೀಮತೇ ವಿಷ್ವಕ್ಸೇನಾಯ ನಮಃ | ೧೧ |
| ಶ್ರಿಯೈ ನಮಃ | ೧೨ |
| ಶ್ರೀಧರಾಯ ನಮಃ | ೧೩ |

ಈ ಗುರುತ್ವಕ್ಕೆ ಪ್ರಮಾಣವು.

"ಪರಂಪರಾ ಮುಪದಿಶೇದ್ಗುರೂಣಾಂ ಪ್ರಥಮೋ ಗುರುಃ
ಆತ್ಮವಿದ್ಯಾ ವಿಶುಧ್ಯರ್ಥಂ ಸ್ವಾಚಾರ್ಯಾದ್ಯಾ ದ್ವಿಜೋತ್ತಮಃ" ಎಂದೂ

"ಸಹಸ್ರಪುರುಷಂ ವಾಪಿ ಶತಪೂರುಷಮೇವವಾ
ತ್ರಿಹಸ್ತಪೂರುಷಂವಾಪಿದ್ವಿಸಪ್ತ ದಶಪೂರುಷಂ" ಎಂದೂ,

"ಆದಾವುಪದಿಶೇದ್ವೇದೇಖಿಖಲಗ್ವೇದ ಸಂಜ್ಞಿಕಂ
ಅಸ್ಮದ್ಗುರುಭ್ಯ ಇತ್ಯಾದಿ ವಾಕ್ಯತ್ರಯಮರಿಂದಮ"

ಇತ್ಯಾದಿ ವಾಕ್ಯಗಳಿಂದ ದೃಢ ಪಟ್ಟಿರುವುದು. ಈ ಮೊದಲಿನ ಮೂರುವಾಕ್ಯಗಳೂ ವೇದೋಕ್ತವಾದುದು.

ಅಪೌರುಷೇಯುವಾದುದೂ, ಪೌರುಷೇಯುವಾದುದೂ, ಆದ ಈ ೧೩ ವಾಕ್ಯಗಳನ್ನೂ ಕಲಸಿ ಹೇಳುವುದರಿಂದ ದೋಷವುಂಟಾಗುವುದಿಲ್ಲವೇ?

ಎಂದರೆ ಇಲ್ಲಿ ಯಾವ ದೋಷವೂ ಉಂಟಾಗುವುದಿಲ್ಲವೆಂದು ಪೂರ್ವಾಚಾರ್ಯರುಗಳು ನಿರ್ಣಯಿಸಿರುವರು.

ಈ ಮೊದಲನೆಯದಾದ ಗುರು ಶಬ್ದವು ಹೇಗೆ ಉಂಟಾಯಿತು? ಮೊದಲು ಎಲ್ಲಿಂದ ಉಪದೇಶವುಂಟಾಯಿತು?

ಶ್ರಿಯಃಪತಿಯಾಗಿಯೂ, ಶ್ರೀವೈಕುಂಠ ನಿಕೇತನನಾಗಿಯೂ, ನಿತ್ಯ ಮುಕ್ತಾನುಭಾವನಾಗಿಯೂ, ನಿರತಿಶಯಾನಂದಯುಕ್ತನಾಗಿಯೂ ಇರುವ ಸರ್ವೇಶ್ವರನು ತನ್ನಸನ್ನಿಧಿಯಲ್ಲಿರುವ ನಿತ್ಯಸೂರಿಗಳಂತೆಯೇ ತನ್ನನ್ನು ಅನುಭವಿಸಿ ನಿತ್ಯ ಕೈಂಕರ್ಯಪರರಾಗಿ ಬಾಳಲು ಯೋಗ್ಯತೆಯಿದ್ದರೂ, ಸಹ ಅದನ್ನು ಬಿಟ್ಟು "ಅಸನ್ನೇವಸಭವತಿ" ಎನ್ನುವಂತೆ ಅಚಿತ್ಕಲ್ಪರಾಗಿ, ಭೋಗಮೋಕ್ಷಶೂನ್ಯರಾಗಿ "ಸಂಯುಕ್ತಮೇತತ್ ಕ್ಷರಮಕ್ಷರಂಚ" ಎನ್ನುವಂತೆ ತಿಲತೈಲವದ್ದಾರುವಹ್ನಿವದ್ದುರ್ವಿವೇಚ ತ್ರಿಗುಣ ದುರತ್ಯಯಾನಾದ್ಯಚಿತ್ಸಂಬಂಧ ತಿರೋಹಿತ ಸ್ವಪ್ರಕಾಶರಾಗಿರುವ ಸಂಸಾರಿ ಚೇತನರ ಪರಿಯನ್ನು ನೋಡಿ ಅವರನ್ನು ಉದ್ಧರಿಸಲು ಸಂಕಲ್ಪಮಾಡಿ "ಸಏಕಾಕೀನರಮೇತ" ಎಂದೂ, "ಭೃಶಂಭವತಿ ದುಃಖಿತಃ" ಎನ್ನುವಂತೆ ಅತ್ಯಂತ ವ್ಯಾಕುಲಚಿತ್ತನಾಗಿ ಈ ಚೇತನರು ಕರಣಕಳೇಬರಗಳಿಲ್ಲದೆ "ಲೂನಪಕ್ಷಇವಾಂಡಜಃ" ಎನ್ನುವಂತೆ ರೆಕ್ಕೆ ಕಡಿದ ಪಕ್ಷಿಯಂತೆ ಬಿದ್ದಿರುವ ದೆಶೆಯಲ್ಲಿ "ನಾಮರೂಪೇವ್ಯಾಕರವಾಣಿ" ಎಂದೂ, "ಅನ್ನಾಳ್ ನೀತಂದ ವಾಕ್ಕೈಯ್ಯಿರ್ಣವಳಿ" ಎಂದೂ ಹೇಳುವಂತೆ ಈ ಚೇತನರಿಗೆ ಕರಣಕಳೇಬರಗಳನ್ನುಕೊಟ್ಟು ಅವುಗಳಿಂದ ಕೈಂಕರ್ಯಾದಿಗಳನ್ನು ನಡೆಸಲು ಶಕ್ತಿಯನ್ನೂಕೊಟ್ಟು, ದೇಹಾತ್ಮಾಭಿಮಾನದಲ್ಲೂ, ದೇವತಾಂತರ ಉಪಾಸನೆಯಲ್ಲೂ ತನಗೆ ತಾನು ಸ್ವತಂತ್ರನೆಂಬ ಈ ಮೂರು ಹಳ್ಳದಲ್ಲಿಯೂ ಬಿದ್ದು ಕೆಟ್ಟುಹೋಗದೆ ತನ್ನನ್ನೇ ಆಶ್ರಯಿಸಿ ಉಜ್ಜೀವಿಸಲು ಸಾಧಕವಾದ "ಅಪದೋಷಮುಮುಂಪ್ರಭುವರ್"ಎನ್ನುವಂತೆ ಅಪೌರುಷೇಯವಾಗಿಯೂ, ಅಲ್ಲದೆ ಪುರುಷನು ತಾನು ಮಾಡುವದುಷ್ಕೃತ್ಯಗಳ ಮಾಲಿನ್ಯದಿಂದ ವಿನಿರ್ಮುಕ್ತವಾಗಿಯೂ, "ವೇದಶಾಸ್ತ್ರಾತ್ ಪರಂನಾಸ್ತಿ" ಎನ್ನುವಂತೆ ಇದಕ್ಕೆ ಮೇಲ್ಪಟ್ಟ ಶಾಸ್ತ್ರವಿಲ್ಲದೆ ಇರುವಂಥಾದ್ದಾಗಿಯೂ, ಸ್ವತಃ

ಪ್ರಮಾಣವಾದ ವೇದವನ್ನು "ಯೋವೈವೇದಾಂಶ್ಚಪ್ರಹಿಣೋತಿತಸ್ಮೈ" ಎಂದೂ," ಅರುಮರೈಯೈವಳಿಪ್ಪಡುತ್ತವನ್ಮಾ" ಎನ್ನುವಂತೆ ನಾರಾಯಣತ್ವ ಪ್ರಯುಕ್ತವಾದ ತನ್ನ ಹೃದಯಪ್ರೀತಿಯಿಂದ ವೇದವನ್ನು ಈ ಚೇತನರಿಗೆ ಉಪದೇಶಿಸಿದನು. ಆದರೆ ಈ ವೇದಾರ್ಥವು ತಿಳಿಯಲು ಅತಿಗಹನವಾದುದರಿಂದಲೂ, ಅಲ್ಪಮತಿಗಳು ಇವ್ವರ್ಥವನ್ನು ತಿಳಿಯಲಾರರೆಂದೂ, ಸದ್ಗತಿಯನ್ನು ಹೊಂದಲಾರರೆಂದೂ, ಉಪದೇಶ ಪರಂಪರೆಯಿಂದಲಾದರೂ (ಉಪದೇಶ—ಹೇಳಿಕೊಟ್ಟು ತಿಳಿಸುವುದು.) ಈ ಚೇತನರನ್ನು ತಿದ್ದಿ ಕಾಪಾಡಬೇಕೆಂದೂ ಆಲೋಚಿಸಿದನು ಆದ್ದರಿಂದಲೇ "ಆಚಾರ್ಯಾಣಾಮಸಾವಸಾವಿತ್ಯಾಭಗವತ್ತಃ" ಎಂಬಂತೆ ಭಗವಂತನೇ ಮೊದಲಾಗಿ ಪರಂಪರೆಯಿಂದ ಇಂಥಿಂಥಾವರೆಂದುಕ್ರಮವಾಗಿ ತಿಳಿದು ಬಂದಿರುವುದು.

* * * * * *

"ಮುನ್ನೈವಣ್ಣಂಪಾಲ್ವಣ್ಣಂ" ಎಂದೂ, "ಶಶಿವರ್ಣಂ"ಎಂದೂ, ವಲ್ಲನೆಂಬಿರ್ರಾವಿಟ್ಟನೇ"ಎಂದೂ, ಹೇಳುವಂತೆ ಮೂಲಮಂತ್ರವನ್ನು ಉಪದೇಶಿಸಬೇಕಾದರೆ ಉಪದೇಶಿಸುವವನಿಗೆ ಇರಬೇಕಾದ ಶುದ್ಧ ಸ್ವಭಾವತ್ವಾಘಟಿತಘಟನಾಸಾಮರ್ಥ್ಯಾದಿಗಳನ್ನುಳ್ಳವನಾಗಿ "ಬಹುಧಾ ವಿಜಾಯತೇ" ಎಂದೂ, "ಶನ್ಮಂಪಲಪಲಶೆಯತು" ಎಂದೂ ಹೇಳುವಂತೆ ಅನೇಕವಿಧ ವಿಭವಾದಿ ಶಕ್ತಿಗಳಿಂದ ಕೂಡಿ "ಮಧ್ಯೇ ವಿರಿಂಚಿಗಿರೀಶಂ ಪ್ರಥಮಾವತಾರಃ" ಎನ್ನುವಂತೆ ಪ್ರಥಮಾವತಾರವಾಗಿ ವಿಷ್ಣುವಾಗಿ ಅವತಾರಮಾಡಿ ಈಗ ಕಾಣುತ್ತಿರುವ ಅಣ್ಡಾಂತರ್ವರ್ತಿಯಾದ ಸತ್ಯಲೋಕಕ್ಕೂ ಅದಕ್ಕೆ ಹತ್ತಿರದಲ್ಲಿರುವ ಶ್ರೀವಿಷ್ಣುಲೋಕದಲ್ಲಿ "ಜಗದುಪಕೃತಯೇ ಸೋಯಮಿಚ್ಛಾವತಾರಃ"ಎನ್ನುವಂತೆ ಈ ಪ್ರಪಂಚವನ್ನು ಉದ್ಧಾರಮಾಡುವುದಕ್ಕಾಗಿ "ಶ್ರೋಣಾನಕ್ಷತ್ರಂ ವಿಷ್ಣುರ್ದೇವತಾ" ಎನ್ನುವಂತೆ ವಿಷ್ಣುದೇವತಾತ್ಮಕವಾದ ಶ್ರವಣ ನಕ್ಷತ್ರದಲ್ಲಿ ಸ್ವೇಚ್ಛೆಯಿಂದ ತಾನೇ ಅವತರಿಸಿ ತಕ್ಷಣವೇ ಇರೈಯುಮಕಲಕಿಲ್ಲೇ ಎಂದಿರುವ ಜಗನ್ಮಾತೆಯನ್ನು [ಪೆರಿಯಪಿರಾಟ್ಟಿ] ಆ ವಿಷ್ಣುಲೋಕದಲ್ಲಿ ತಾನೇ "ಪದ್ಮೇಸ್ಥಿತಾಂ"ಎಂದೂ"ತೇನೇಮಲರುಂ" ಪೂಮೇಲಿರುಪ್ಪಾಳ್ ಎಂದೂ, "ವಿಷ್ಣುಪತ್ನೀ" ಎಂದೂ ಹೇಳುವಂತೆ

ಆಗಿಂದಾಗಲೇ ಕಮಲ ಪುಷ್ಪದಲ್ಲಿ ಮಹಾಲಕ್ಷ್ಮೀ ಎನ್ನುವ ಹೆಸರಿನಿಂದ ಅವತರಿಸುವಂತೆ ಮಾಡಿ ತನ್ನ ಪಟ್ಟಮಹಿಷಿಯನ್ನಾಗಿ ಸ್ವೀಕರಿಸಿದನು.

ಅನಂತರ ಚೇತನರು ತನ್ನನ್ನು ತಿಳಿದು ಬಾಳಲು ಉಪದೇಶ ಮಾರ್ಗವನ್ನು ಬೋಧಿಸಲು ಜ್ಞಾನಕರ್ಮಗಳ ಗುರುತಾಗಿ ಏರ್ಪಟ್ಟಿರುವ ತಾಪಃಪುಣ್ಡ್ರಸ್ತಥಾನಾಮಮನ್ತ್ರೋಯಾಗಶ್ಚಪಂಚಮಃ ಅಮೀಪರಮ ಸಂಸ್ಕಾರಾಃ ಪಾರಮೈಕಾನ್ತ್ಯಹೇತವಃ" ಎಂಬ ರಹಸ್ಯತ್ರಯವನ್ನು ಲೋಕಕ್ಕೆ ತಿಳಿಸಲು ಉದ್ಯುಕ್ತನಾದನು.

ಈ ವೇದೋಕ್ತ ವಾಕ್ಯತ್ರಯ ಪ್ರಮಾಣದಂತೆ "ಶ್ರೀವಿಷ್ಣುಲೋಕೇ ಭಗವಾನ್ ವಿಷ್ಣುರ್ನಾರಾಯಣಸ್ಸ್ವಯಂ ಪ್ರೋಕ್ತವಾನ್ ಮನ್ತ್ರರಾಜಾದೀನ್ ಲಕ್ಷ್ಮ್ಯೈ ತಾಪಾದಿಪೂರ್ವಕಂ"ಎಂದು ಜಗನ್ಮಾತೆಯಾದ ಶ್ರೀಮಹಾಲಕ್ಷ್ಮಿಗೆ ತಾಪೋರ್ಧ್ವಪುಣ್ಡ್ರದಾಸ್ಯನಾಮ ಪ್ರಧಾನ ಪುರಸ್ಸರವಾಗಿ ಈ ವಾಕ್ಯ ತ್ರಯೋಪದೇಶಪೂರ್ವಕವಾಗಿ, ಸ್ವರೂಪೋಪಾಯ ಪುರುಷಾರ್ಥ ಯಾಥಾತ್ಮ್ಯ ಪ್ರತಿಪಾದಕವಾದ ರಹಸ್ಯತ್ರಯವನ್ನು ನೇರಾಗಿ ತಾನೇ ಉಪದೇಶಿಸಿದನು.

ಹೀಗೆ ಉಪದೇಶಮಾಡಿದುದರಿಂದ "ವಿಷ್ಣುಮಾದಿಗುರುಂಲಕ್ಷ್ಮ್ಯಾಃ ಮನ್ತ್ರರತ್ನಪ್ರದಂಭಜೇ"ಎಂಬಂತೆ ಶ್ರೀಮಹಾ ವಿಷ್ಣುವು ಶ್ರೀ ಮಹಾ ಲಕ್ಷ್ಮಿಗೆ ಪ್ರಥಮ ಗುರುವಾದನು.

೨. ಅನಂತರ ಇದೇ ರೀತಿಯಲ್ಲಿ "ಸ್ವೋಪದಿಷ್ಟಾನತಿ ಪ್ರೀತ್ಯಾ ತಾಪಃ ಪುಣ್ಡ್ರಾದಿಪೂರ್ವಕಂ ವಿಷ್ಣುಲೋಕೇವತೀರ್ಣಾಯ ಪ್ರಿಯಾಯ ಸತತಂ ಹರೇಃ—ಸೇನೇಶಾಯಪ್ರಿಯಾವಿಷ್ಣೋಃ ಮೂಲಮನ್ತ್ರದ್ವಯಾದಿಕಂ" ಎನ್ನುವಂತೆ ಅದೇ ಶ್ರೀವಿಷ್ಣುಲೋಕದಲ್ಲಿ ತಾನೇ ಮಹಾಲಕ್ಷ್ಮಿಯ ಮೂಲಕ ವಿಷ್ವಕ್ಸೇನರಿಗೆ ಮೇಲಿನ ರೀತಿಯಲ್ಲಿ ರಹಸ್ಯತ್ರಯವನ್ನು ಉಪದೇಶಮಾಡಿಸಿದನು.

೩. ಅನಂತರ ಇದೇರೀತಿಯಲ್ಲಿ "ಸೇನೇಶಃ ಸ್ವಯಮಾಗತ್ಯ ಪ್ರೀತ್ಯಾ ಶ್ರೀನಗರೀಂಶುಭಾಂ| ಶಠಕೋಪಾಯ ಮುನಯೇ ತಿನ್ತ್ರಿಣೀಮೂಲವಾಸಿನೇ ತಾಪಾದಿಪೂರ್ವಕಂ ಮನ್ತ್ರದ್ವಯಶ್ಲೋಕವರ್ರಾ ಕ್ರಮಾತ್|ವಿಷ್ಣುಪತ್ನ್ಯಾ ಶ್ರೀ ಮಹಾಲಕ್ಷ್ಮ್ಯಾ ನಿಯೋಗಾದುಪತಿಷ್ಟವಾರ್" ಎಂಬಂತೆ ಈ ಮೇಲಿನ ಕ್ರಮದಲ್ಲಿಯೇ ವಿಷ್ವಕ್ಸೇನರಿಂದ ತಿರುನಗರಿಯಲ್ಲಿ ತಿಂತ್ರಿಣೀ ಮರದಡಿಯಲ್ಲಿ ವಾಸಿಸುತ್ತಿದ್ದ ಆಳ್ವಾರ್ರಿಗೆ ತಾಪಾದಿ ಪಂಚಸಂಸ್ಕಾರ ಪೂರ್ವಕವಾಗಿ ರಹಸ್ಯತ್ರಯೋಪದೇಶವನ್ನು ಮಾಡಿ ಅನುಗ್ರಹಿಸಿದನು.

## ಗುರುಪರಂಪರೆ.

ಈ ರೀತಿ ಮೇಲೆ ತಿಳಿಸಿದಂತೆ ಒಬ್ಬರಿಂದ ಒಬ್ಬರಿಗೆ ಅವರಿಂದ ಇನ್ನೊಬ್ಬರಿಗೆ ಅವರಿಂದ ಮುಂದಿನವರಿಗೆ ಈ ರೀತಿಯಲ್ಲಿ ಉಪದೇಶಮಾಡಿ (ಸರಪಣಿಯಂತೆ) ಬರುವುದೇ ಪರಂಪರೆಯು. ಅವರಿಗಿರುವ ಸಂಬಂಧವು ಎಂದರೆ ಉಪದೇಶಿಸುವವನಿಗೆ ಗುರುವೆಂದೂ, ಕೇಳಿದವನಿಗೆ ಶಿಷ್ಯನೆಂದೂ ವ್ಯವಹಾರವು.

ಈ ರೀತಿಯಲ್ಲಿ ಪರಂಪರೆಯಾಗಿ ಮುಂದು ಮುಂದಿನವರಿಗೆ ವೇದೋಕ್ತವಾದ ಈ ಆತ್ಮವಿದ್ಯಾರಹಸ್ಯ ಮಂತ್ರವನ್ನು ಉಪದೇಶಿಸುವ ಸಾಲಿಗೆ **ಗುರುಪರಂಪರೆ** ಎಂದು ಹೆಸರು—

ಇಲ್ಲಿಗೆ ವೇದೋಕ್ತವಾದ "**ಗುರು, ಪರಮಗುರು, ಸರ್ವಗುರು**" ಎನ್ನುವ ವಾಕ್ಯತ್ರಯವು ಸಿದ್ಧಿಸಿತು.

೪. ಅನಂತರ "ಪುನಶ್ಚ ನಾಥಮುನಯೇ ಪಂಚಸಂಸ್ಕಾರಪೂರ್ವಕಂ ಭಟ್ಟನಾಥಪ್ರಭೃತಿಭಿರ್ನಿರ್ಮಿತೈರ್ದಿವ್ಯಯೋಗಿಭಿಃ | ದಿವ್ಯೈಶ್ಚ ವಿಂಶತಿಸಂಖ್ಯಾಕೈಃ ಪ್ರಬನ್ಧೈಸ್ಸಹದೇಶಿಕಃ| ಸ್ವೋಕ್ತದ್ರಾವಿಡವೇದಾನಾಂ ಚತುರ್ಣಾಮುಪದೇಶಕೃತ್"—ಎನ್ನುವಂತೆ ಆಳ್ವಾರ್ರಿಂದ ಆ ತಿರುನಗರಿಯಲ್ಲಿಯೇ ಆ ತಿಂತ್ರಿಣೀ ಮರದಡಿಯಲ್ಲಿಯೇ ನಾಥಮುನಿಗಳಿಗೆ ಮೇಲಿನ ತಾಪಾದಿಕ್ರಮದಲ್ಲಿ ರಹಸ್ಯ

ತ್ರಯೋಪದೇಶವನ್ನೂ, ಮತ್ತು ದಿವ್ಯಪ್ರಬನ್ಧೋಪದೇಶವನ್ನೂ ಮಾಡಿಸಿದನು—

೫. ಅಂತೆಯೇ ನಾಥಮುನಿಗಳಿಂದ ಉಯ್ಯಕೊಂಡಾರ್ರೀ ಮೊದಲಾದವರಿಗೂ,

೬. ಉಯ್ಯಕೊಂಡಾರ್ರಿಂದ ಮಣಕ್ಕಾಲ್‌ನಂಬಿಯೇ ಮೊದಲಾದವರಿಗೂ,

೭. ಮಣಕ್ಕಾಲ್‌ನಂಬಿಯವರಿಂದ ಆಳವನ್ದಾರ್ರೀ ಮೊದಲಾದವರಿಗೂ

೮. ಆಳವನ್ದಾರಿಂದ ಪೆರಿಯನಂಬಿಯೇ ಮೊದಲಾದವರಿಗೂ,

೯. ಪೆರಿಯನಂಬಿಯವರಿಂದ ಶ್ರೀಭಾಷ್ಯಕಾರರಿಗೂ ಈ ಕ್ರಮದಲ್ಲಿ ರಹಸ್ಯತ್ರಯೋಪದೇಶವನ್ನು ಭಗವಂತನೇ ಮಾಡಿಸಿದನು.

೧೦. ಅನಂತರ ಮೇಲಿನ ರೀತಿಯಲ್ಲಿಯೇ ಶ್ರೀಭಾಷ್ಯಕಾರರಿಂದ ಆಳ್ವಾರ್, ಆಂಡಾರ್ ಮೊದಲಾದ ೭೪ ಪೀಠಾಧಿಪತಿಗಳಿಗೂ (ಸಿಂಹಾಸನಾಧಿಪತಿಗಳು) ಮತ್ತು ಎಂಬಾರ್ ಅರುಳಾಳಪ್ಪೆರುಮಾಳೆಂಬೆರುಮಾನಾರ್ ಮೊದಲಾಗಿ ೭೦೦ ಜೀಯರುಗಳಿಗೂ ಮತ್ತು ಅನೇಕ ಶ್ರೀವೈಷ್ಣವರುಗಳಿಗೂ, ಈ ಮೇಲಿನ ಕ್ರಮವು ತಪ್ಪದಂತೆ ಈ ರಹಸ್ಯತ್ರಯೋಪದೇಶವನ್ನು ಮಾಡಿಸಿದನು—

## ವಾಕ್ಯ ಗುರುಪರಂಪರೆಯ ಆರಂಭವು.

ಈ ರೀತಿಯಲ್ಲಿ ಉಪದೇಶ ಪರಂಪರೆಯು ಬಂದಮೇಲೆ ಶ್ರೀರಾಮಾನುಜಾಚಾರ್ಯರು ದರ್ಶನಸಿದ್ಧಾಂತವನ್ನು ನಿರ್ವಹಿಸಿಕೊಂಡು ಬರುವ ಕಾಲದಲ್ಲಿ ಶ್ರೀಭಾಷ್ಯಕಾರರ ಸರ್ವಜ್ಞತ್ವವೂ, ಶೇಷಾಂಶಾವತಾರದಿಂದ ಲೋಕಕ್ಷೇಮಕ್ಕಾಗಿಯೇ ಅವತರಿಸಿ ಬಂದಿರುವುದೂ ತಿಳಿದು ಬಂದುದರಿಂದ

ಶ್ರೀಭಾಷ್ಯಕಾರರನ್ನು, ಹಿಂದಿನ ಆಚಾರ್ಯರುಗಳೂ ಮುಂದಿನ ಆಚಾರ್ಯರುಗಳೂ ಸಹ ಅವರನ್ನು ಉತ್ತಾರಕಾಚಾರ್ಯರೆಂದು ಘೋಷಿಸಿದರು. ಶ್ರೀಭಾಷ್ಯಕಾರರು ಈ ಅಧಿಕಾರದ ಮೇಲೆಯೂ, ಮುಂದೆ ಗುರುಪರಂಪರಾ ಕ್ರಮವು ವ್ಯತ್ಯಾಸವಾಗಬಾರದೆಂದೂ, ನಿಯಮ ಬದ್ಧವಾಗಿಯೂ ಇರುವಂತೆ ಈ **ವಾಕ್ಯ ಗುರುಪರಂಪರೆಯನ್ನು** ನಿರ್ಣಯ ಮಾಡಿದರು.

"ಪ್ರೀತ್ಯಾ ಪೃಥಕ್ಪೃಥಕ್ ಶಿಷ್ಯಃ ಪ್ರಣಮೇದೀಶ್ವರಾವಧಿ| ಸ್ವಾರಾಧ್ಯಂ ಯಾವದಾಜ್ಞಾತುಂ ವಾಕ್ಯಂ ತಾವದನುಸ್ಮರೇತ್||" ಎಂಬಂತೆಯೂ "ಪ್ರತ್ಯಹಂಪ್ರಣತೈಶ್ಶಿಷ್ಯೈಃ ಪ್ರಭಾತೇ ಪದ್ಮಸಂಭವ| ತದ್ಯಥಾವಿಧಿನಾ ನಿತ್ಯಂ ಪ್ರವಕ್ತವ್ಯಂ ಗುರೋಃ ಕುಲಂ" ಎಂಬಂತೆ ಈ ವೇದೋಕ್ತವಾದ ವಾಕ್ಯತ್ರಯದೊಂದಿಗೆ**ಶ್ರೀಮತೇರಾಮಾನುಜಾಯನಮಃ** ಮೊದಲಾಗಿ **ಶ್ರೀಧರಾಯನಮಃ** ಎನ್ನುವ ವರೆಗಿರುವ ೧೦ ವಾಕ್ಯಗಳನ್ನು ಸೇರಿಸಿ ೧೩ ವಾಕ್ಯಗಳನ್ನಾಗಿಮಾಡಿ ಈ ವಾಕ್ಯಗುರುಪರಂಪರೆಯನ್ನು ಮುಂದೆ ಬರುವ ಆಚಾರ್ಯರುಗಳು ಅನುಸಂಧಿಸಬೇಕಲ್ಲದೆ ತಮ್ಮ ತಮ್ಮನ್ನು ಆಶ್ರಯಿಸಿದ ಶಿಷ್ಯರಿಗೆ ಉಪದೇಶಿಸಬೇಕೆಂದೂ ಕಟ್ಟಳೆಯಿಟ್ಟರು. ಈ ಪ್ರಚಾರಕಾರ್ಯವನ್ನು ನಡೆಸಲು ಕೂರತ್ತಾಳ್ವಾರ್ರಿಗೆ ನಿಯಮಿಸಿದರು. ಈ ನಿಯಮವನ್ನನುಸರಿಸಿ ಇದು ಅಲ್ಲಿಂದ ಲೋಕಕ್ಕೆಲ್ಲಾ ಹರಡಲ್ಪಟ್ಟಿತು.

"ಅನ್ವಯಾದಪಿಚೈಕಸ್ಯ ಸಮ್ಯಜ್ಞ್ಯಸ್ತಾತ್ಮನೋ ಹರೌ
ಸರ್ವಏವ ಪ್ರಮುಚ್ಯೇರನ್ ನರಾಃ ಪೂರ್ವೇ ಪರೇ ತಥಾ" ಎಂದೂ

"ಅರ್ವಾಂಚೋ ಯತ್ಪದಸರಸಿಜದ್ವಂದ್ವಮಾಶ್ರಿತ್ಯಪೂರ್ವೇ
ಮೂರ್ಧ್ನಾ ಯಸ್ಯಾನ್ವಯಮುಪಗತಾ ದೇಶಿಕಾ ಮುಕ್ತಿಮಾಪ್ತಾಃ|
ಸೋಯಂ ರಾಮಾನುಜಮುನಿರಪಿ ಸ್ವೀಯಮುಕ್ತಿಂ ಕರಸ್ಥಾಂ
ಯತ್ಸಂಬಂಧಾದಮನುತ ಕಥಂ ವರ್ಣ್ಯತೇ ಕೂರನಾಥಃ||"

ಎನ್ನುವಂತೆ ಪೂರ್ವಾಚಾರ್ಯರಾದ ಪ್ರತಿಯೊಬ್ಬರೂ ಅವರವರ ಗುರುಗಳ (ಪೂರ್ವಾಚಾರ್ಯರುಗಳ) ಅನುಸಂಧಾನದಿಂದಲೇ ಮುಕ್ತಿಯನ್ನು ಹೊಂದಿರುವುದು ಕಂಡು ಬರುವುದು.

ಶ್ರೀಭಾಷ್ಯಕಾರರ ಹಿಂದಿನ ಆಚಾರ್ಯರುಗಳಿಗೂ ಮುಂದಿನ ಆಚಾರ್ಯರುಗಳಿಗೂ ಸಹ ಶ್ರೀರಾಮಾನುಜಾಚಾರ್ಯರೇ ಉತ್ತಾರಕ ಗುರುಗಳಾಗಿಯೂ, ಸರ್ವಜ್ಞರಾಗಿಯೂ ಇದ್ದರೂ "ತಥಾಪಿ ಸಮಯಾನ್ ಸರ್ವಾನ್ ಸ್ಥಾಪಯನ್ ಸಾಂಪ್ರದಾಯಿಕಂ'' ಎನ್ನುವಂತೆ ಶ್ರೀರಾಮಾನುಜಾಚಾರ್ಯರೂ ಸಹ ಶಾಸ್ತ್ರಸಂಪ್ರದಾಯ ಕ್ರಮವನ್ನು ಉಲ್ಲಂಘಿಸದೆ ಗುರುಪರಂಪರೆಯನ್ನು ಅನುಸಂಧಿಸಿ ಸ್ಥಾಪಿಸತಕ್ಕವರಾಗಿಯೇ ಇರುವರು.

ಈ ರೀತಿಯಲ್ಲಿ ಚೇತನಸ್ವರೂಪವನ್ನು ಉಪದೇಶ ಮೂಲಕ ತಿದ್ದಿ ಪುಷ್ಪಿತವಾಗುವಂತೆಯೂ, ಫಲಭರಿತವಾಗುವಂತೆಯೂ ಮಾಡಿ ಭಗವಂತನು ತಾನು ಮಾಡಬೇಕಾದ ಕಾರ್ಯವನ್ನು ಮಾಡಿ ವಿಜ್ವರಃ ಪ್ರಮುಮೋದಹ ಎನ್ನುವಂತೆ ಸಂತೋಷಚಿತ್ತನಾದನು.

ಈ ರೀತಿಯಲ್ಲಿ ಏರ್ಪಟ್ಟು ನಿಯಮಿಸಿದ ವಾಕ್ಯ ಗುರುಪರಂಪರೆಯಲ್ಲಿ ಸನ್ಯಾಸಿಗಳೂ ಗೃಹಸ್ಥರೂ ಇರುವರು. ವರ್ಣಾಶ್ರಮಧರ್ಮವನ್ನು ಅನುಸರಿಸಿ ಜನಗಳಿಗೆ ಗೃಹಸ್ಥರಿಗಿಂತಲೂ ಸನ್ಯಾಸಿಗಳು ಶ್ರೇಷ್ಠರೆಂಬ ಭಾವನೆಯಿರುವುದು. ಆದರೆ ಕರ್ಮಭಾಗಕ್ಕಿಂತ ವೇದಾಂತಜ್ಞಾನವೇ ಶ್ರೇಷ್ಠವೆಂದು ತಿಳಿದು ಬಂದಿರುವುದರಿಂದ ಗುರುಪರಂಪರೆಯಲ್ಲಿ ಸನ್ಯಾಸಿಗಳಿಗೆ ಗೃಹಸ್ಥರು ಶಿಷ್ಯರಾಗಿಯೂ, ಗೃಹಸ್ಥರಿಗೆ ಸನ್ಯಾಸಿಗಳು ಶಿಷ್ಯರಾಗಿಯೂ ಎರಡುವಿಧವಾಗಿಯೂ ಕಾಣಬರುವರು.

ಆಗ ಅವರವರ ಗುರುಭಾವನೆಗಳು ಹೇಗೆ ? ಎಂಬ ಸಂದೇಹವು ಬರುವುದರಿಂದ ೪ ರಿಂದ ೧೩ ರವರೆಗೆ ಮೇಲಿನ ವೇದೋಕ್ತವಾದ ವಾಕ್ಯತ್ರಯವನ್ನು ಅನ್ವಯಿಸಿ ಅವರವರ ಭಾವನೆಯನ್ನೂ ಸಂಬಂಧವನ್ನೂ ತಿಳಿಸಲಾಗುವುದು.



**ಅಸ್ಮದ್ಗುರುಭ್ಯೋ ನಮಃ** ೧ ನೇ ವಾಕ್ಯವು
**ಅಸ್ಮತ್ಪರಮಗುರುಭ್ಯೋ ನಮಃ** ೨ ನೇ ವಾಕ್ಯವು
**ಅಸ್ಮತ್ಸರ್ವಗುರುಭ್ಯೋ ನಮಃ** ೩ ನೇ ವಾಕ್ಯವು

## ೧. **ಶ್ರೀಭಾಷ್ಯಕಾರರು** (ಶ್ರೀರಾಮಾನುಜಾಚಾರ್ಯರು)

ಈ ವಾಕ್ಯತ್ರಯವನ್ನು ತಾವು ಅನುಸಂಧಿಸುವಾಗ ೧ ನೇ ವಾಕ್ಯದಂತೆ ಗುರುಗಳು ಪೆರಿಯನಂಬಿಗಳು. ಆದರೆ ಇಲ್ಲಿ ಅಸ್ಮದ್ಗುರುಭ್ಯೋ ನಮಃ ಎನ್ನುವಾಗ ಗುರುಭ್ಯಃ ಎಂದು ಬಹುವಚನವಿರುವುದರಿಂದ ತಿರುಕ್ಕಚ್ಚಿ ನಂಬಿಗಳೂ ಮತ್ತು ವರದರಾಜರೂ, ಎಂದೂ,

೨ ನೇ ವಾಕ್ಯದಂತೆ ಪರಮಗುರುಗಳು ಆಳವಂದಾರ್ರು. ಆದರೆ ಇಲ್ಲೂ ಪರಮಗುರುಭ್ಯಃ ಎಂದು ಬಹುವಚನವಿರುವುದರಿಂದ ಸಬ್ರಹ್ಮಚಾರಿಗಳಾದ ಹಿರಿಯರೆಲ್ಲರೂ ಎಂದೂ,

೩ ನೇ ವಾಕ್ಯವಾದ ಸರ್ವಗುರುಗಳು ಎನ್ನುವಾಗ ಇಲ್ಲಿ ಸರ್ವ ಶಬ್ದವು ಬಹುವಚನವಾದ್ದರಿಂದ ಮಣಕ್ಕಾಲ್‌ನಂಬಿ ಆದಿಯಾಗಿ ಮೇಲಿನ ಎಲ್ಲಾ ಹಿರಿಯರೂ, ಎಂದೂ ತಿಳಿಯಬೇಕು.

ಈ ರೀತಿಯಲ್ಲಿಯೇ ಶ್ರೀಭಾಷ್ಯಕಾರರಿಗೆ ಪೂರ್ವ ಆಚಾರ್ಯರುಗಳಲ್ಲಿ

## ೨ **ಶ್ರೀ ಪೆರಿಯನಂಬಿಗಳು** (ಶ್ರೀಪರಾಂಕುಶದಾಸರು)

ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ೧ ನೇ ವಾಕ್ಯರೀತ್ಯಾ ಗುರುಗಳು ಆಳವಂದಾರ್ರು ಎಂದೂ,

೨ ನೇ ವಾಕ್ಯರೀತ್ಯಾ ಪರಮಗುರುಗಳು ಮಣಕ್ಕಾಲ್‌ನಂಬಿಗಳು, ಮೇಲಿನ ಎರಡು ವಾಕ್ಯಗಳಲ್ಲೂ ಬಹುವಚನವಿರುವುದರಿಂದ ಇವರುಗಳಿಗೆ ಮೇಲಿನ ಗುರು ಪರಮಗುರುಗಳಲ್ಲಿ ಪ್ರೀತಿಯುಂಟಾಗುವಂತೆ

ಮಾಡಿರುವ ಶ್ರೀವೈಷ್ಣವರುಗಳೂ ಮತ್ತು ಇವರಿಗೆಲ್ಲರಿಗೂ ಪರಮ ಪ್ರಾಪ್ಯನಾದ ಈಶ್ವರನೂ ಎಂದೂ

೩ ನೇ ವಾಕ್ಯವಾದ ಗುರಪದ ಸರ್ವಶಬ್ದ ಬಹುವಚನಪ್ರತಿಪಾದ್ಯರು ಉಯ್ಯಕೊಂಡಾರ್ರೇ ಮೊದಲಾಗಿ ಶ್ರಿಯಃಪತಿವರೆಗಿನವರು ಎಂದು ಅರ್ಥವು

### ೩ ಆಳವಂದಾರ್ರು (ಶ್ರೀಮದ್ಯಾಮುನಮುನಿಗಳು)

ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಗುರುಪದ ಪ್ರತಿಪಾದ್ಯರು ಮಣಕ್ಕಾಲ್‌ನಂಬಿಗಳು ಎಂದೂ,

೨ ನೇ ವಾಕ್ಯದಂತೆ ಪರಮಗುರು ಪ್ರತಿಪಾದ್ಯರು ಉಯ್ಯಕೊಂಡಾರ್ರು

ಇವೆರಡರಲ್ಲೂ ಬಹುವಚನ ಪ್ರತಿಪಾದ್ಯರು ಮೋಕ್ಷಮಾರ್ಗದಲ್ಲಿ ರುಚಿಯನ್ನ ಹುಟ್ಟಿಸಿ ಶ್ರೀವೈಷ್ಣವತ್ವವನ್ನು ಹೊಂದಲು ಸಹಕರಿಸಿದ ಶ್ರೀವೈಷ್ಣವರುಗಳೂ, ಈಶ್ವರನೂ ಎಂದೂ

೩ ನೇ ವಾಕ್ಯವಾದ ಗುರುಪದ ಸರ್ವಶಬ್ದ ಬಹುವಚನ ಪ್ರತಿಪಾದ್ಯರು ಶ್ರೀಮನ್ನಾಥಮುನಿಗಳು ಮೊದಲಾಗಿ ಶ್ರೀಧರನ ವರೆಗೆ ಇರುವ ಯಾವತ್ತು ಆಚಾರ್ಯರುಗಳೂ ಎಂದೂ ತಿಳಿಯಬೇಕು.

### ೪. ಮಣಕ್ಕಾಲ್‌ನಂಬಿಗಳು (ಶ್ರೀರಾಮಮಿಶ್ರರು)

ಈ ವಾಕ್ಯತ್ರಯವನ್ನುಅನುಸಂಧಿಸುವಾಗ ಪ್ರಥಮ ದ್ವಿತೀಯ ವಾಕ್ಯಸ್ಥ ಗುರು ಪರಮಗುರು ಪ್ರತಿಪಾದ್ಯರು ಉಯ್ಯಕೊಂಡಾರ್ರು ಮತ್ತು ನಾಥಮುನಿಗಳೂ ಎಂದೂ,

ಇವೆರಡರಲ್ಲೂ ಬಹುವಚನ ಪ್ರತಿಪಾದ್ಯರು ಈ ಶ್ರೀವೈಷ್ಣವತ್ವವನ್ನು ಹೊಂದಲು ಬೇಕಾದ ರುಚಿಯನುಂಟುಮಾಡಿದ ಶ್ರೀವೈಷ್ಣವರೂ ಈಶ್ವರನೂ ಎಂದೂ,

ತೃತೀಯ ವಾಕ್ಯಸ್ಥ ಗುರುಪದ ಸರ್ವಶಬ್ದ ಬಹುವಚನ ಪ್ರತಿಪಾದ್ಯರು ನಮ್ಮಾಳ್ವಾರ್ರೇ ಮೊದಲಾಗಿ ಮತ್ತೆಲ್ಲರೂ ಎಂಬುದಾಗಿ ತಿಳಿಯಬೇಕು.

**೫. ಉಯ್ಯಕೊಂಡಾರ್ರು** (ಶ್ರೀಪುಂಡರೀಕಾಕ್ಷರು)

ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಆದಿ ಮಧ್ಯ ವಾಕ್ಯಗತ ಗುರು ಪರಮಗುರುಪದ ಪ್ರತಿಪಾದ್ಯರು ನಾಥಮುನಿಗಳೂ, ನಮ್ಮಾಳ್ವಾರೂ

ಇವೆರಡರಲ್ಲೂ ಬಹುವಚನ ಪ್ರತಿಪಾದ್ಯರು ಈ ಶ್ರೀವೈಷ್ಣವ ಮತದಲ್ಲಿ ಪ್ರವೇಶಿಸಲು ಯಥಾ ರುಚಿಯನ್ನುಂಟುಮಾಡಿದ ಹಿರಿಯರೂ ಸರ್ವೇಶ್ವರನೂ

ತೃತೀಯ ವಾಕ್ಯಗತ ಗುರುಪದ ಸರ್ವಶಬ್ದ ಬಹುವಚನ ಪ್ರತಿಪಾದ್ಯರು ಸೇನೆಮೊದಲಿಯಾರ್ರು ಮೊದಲಾಗಿ ಮೇಲಿನವರೆಲ್ಲರೂ ಎಂದೂ ತಿಳಿಯಬೇಕು

**೬. ಶ್ರೀಮನ್ನಾಥಮುನಿಗಳು** ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಪ್ರಥಮ ದ್ವಿತೀಯ ವಾಕ್ಯಗತ ಗುರು ಪರಮಗುರುಪದ ಪ್ರತಿಪಾದ್ಯರು ನಮ್ಮಾಳ್ವಾರ್ರೂ, ಸೇನೆಮೊದಲಿಯಾರ್ರೂ ಎಂದೂ,

ಇವೆರಡರಲ್ಲಿಯೂ ಬಹುವಚನ ಪ್ರತಿಪಾದ್ಯರು ಈ ಶ್ರೀವೈಷ್ಣವತ್ವದ ಸಂಬಂಧವಾಗಲು ಘಟಕರಾದ ಶ್ರೀವೈಷ್ಣವರುಗಳೂ, ಸರ್ವೇಶ್ವರನೂ

ತೃತೀಯವಾಕ್ಯಗತ ಗುರುಪದ ಸರ್ವಶಬ್ದ ಬಹುವಚನ ಪ್ರತಿಪಾದ್ಯರು ಪಿರಾಟ್ಟಿಯೂ [ಶ್ರೀಮಹಾಲಕ್ಷ್ಮಿಯು] ಸರ್ವೇಶ್ವರನೂ, ಮತ್ತು ಎಲ್ಲಾ ಶ್ರೀವೈಷ್ಣವರೂ ಎಂದು ತಿಳಿಯಬೇಕು.

**೭. ಶ್ರೀ ನಮ್ಮಾಳ್ವಾರ್ರು** (ಶ್ರೀಶಠಕೋಪರು)

ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಗುರು ಪರಮಗುರು ಪದ ಪ್ರತಿಪಾದ್ಯರು ಸೇನೆಮೊದಲಿಯಾರ್ರೂ, ಪಿರಾಟ್ಟಿಯೂ, [ ಮಹಾಲಕ್ಷ್ಮಿ ]

ಇವೆರಡರಲ್ಲಿಯೂ ಬಹುವಚನ ಪ್ರತಿಪಾದ್ಯರು ಇವರಿಬ್ಬರಿಗೂ ಪ್ರಾಣ ಸಮಾನರಾದ ಕೆಲವರೆಂದೂ ತಿಳಿಯಬೇಕು

ತೃತೀಯ ವಾಕ್ಯಗತ ಗುರುಪದ ಸರ್ವಶಬ್ದ ಬಹುವಚನ ಪ್ರತಿಪಾದ್ಯರು ಸರ್ವೇಶ್ವರನೂ, ವ್ಯೂಹ, ವಿಭವಾದಿ ಅವತಾರಗಳೂ, ನಿತ್ಯಸೂರಿಗಳೂ ಎಂಬುದಾಗಿ ತಿಳಿಯಬೇಕು.

## ೮. ಸೇನೆಮೊದಲಿಯಾರ್ [ಶ್ರೀವಿಷ್ವಕ್ಸೇನರು]

ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಪ್ರಥಮ ದ್ವಿತೀಯ ವಾಕ್ಯಗತ ಗುರು ಪರಮಗುರು ಪ್ರತಿಪಾದ್ಯರು ಪಿರಾಟ್ಟಿಯೂ[ಶ್ರೀಲಕ್ಷ್ಮೀ ದೇವಿಯು] ವಿಷ್ಣ್ವವತಾರವಾದ ಸರ್ವೇಶ್ವರನೂ ಎಂದೂ,

ಇವೆರಡಲ್ಲಿರಯೂ ಬಹುವಚನಪ್ರತಿಪಾದ್ಯರು ಅವಳಿಗೆ[ಲಕ್ಷ್ಮೀದೇವಿಗೆ] ಸ್ತನಬಾಹುದೃಷ್ಟಿ ಸ್ಥಾನೀಯರಾದ ಇತರ ಪಿರಾಟ್ಟಿಯರೂ, [ಭೂಮಿ, ನೀಳಾದೇವಿಗಳೂ] ಅವನ (ಸರ್ವೇಶ್ವರನ) ಕಿಂಕರರೂ, ಭಕ್ತರೂ ಆದ ಇತರ ಎಲ್ಲಾ ದೇವತೆಗಳೂ, ಎಂದೂ,

ತೃತೀಯ ವಾಕ್ಯಗತ ಗುರುಪದ ಸರ್ವಶಬ್ದ ಬಹುವಚನ ಪ್ರತಿಪಾದ್ಯರು ಈ ಅವತಾರಕ್ಕೆ ಆಧಾರಭೂತನಾದ ಕ್ಷೀರಾಬ್ಧಿಶಾಯಿಯೂ, ಮತ್ತು ವ್ಯೂಹಾವತಾರಗಳೂ, ಶ್ವೇತದ್ವೀಪನಿವಾಸಿಗಳೂ ಎಂದೂ, ಈ ವರಿಶೆಗಳಲ್ಲಿ ಇದರ ಅರ್ಥವನ್ನು ಹೇಳಬೇಕು.

## ೯. ಪಿರಾಟ್ಟಿ [ಶ್ರೀ ಮಹಾಲಕ್ಷ್ಮೀಯು]

ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಆದಿಮಧ್ಯ ವಾಕ್ಯಗತ ಗುರು ಪರಮಗುರು ಪ್ರತಿಪಾದ್ಯರು ವಿಷ್ಣ್ವವತಾರವಾದ ಸರ್ವೇಶ್ವರನೂ ಆ ಅವತಾರಕ್ಕೆ ಮೂಲಭೂತನಾದ ವ್ಯೂಹ ವಾಸುದೇವನೂ ಎಂದೂ,

ಇವೆರಡರಲ್ಲಿಯೂ ಬಹುವಚನ ಪ್ರತಿಪಾದ್ಯರು ಪೆರಿಯತಿರುವಡಿಯೇ [ಗರುಡದೇವರು] ಮೊದಲಾದವರೂ, ಮತ್ತು ಸಂಕರ್ಷಣ ಅನಿರುದ್ಧ ಪ್ರದ್ಯುಮ್ನಾದಿಗಳು ಎಂದೂ,

ತೃತೀಯ ವಾಕ್ಯಸ್ಥ ಗುರುಪದ ಸರ್ವಶಬ್ದ ಬಹುವಚನ ಪ್ರತಿಪಾದ್ಯರು ವೈಕುಂಠಾಧಿಪತಿಯೂ, ಅಲ್ಲದೆ ಈ ಚೇತನರಿಗಾಗಿ ಈ ಲೀಲಾವಿಭೂತಿ ಯಲ್ಲಿ ಭಗವಂತನು ಪರಿಗ್ರಹಿಸುವ ಕೆಲವು ಅವತಾರಗಳೂ, ಮತ್ತು ನಿತ್ಯಸಿದ್ಧರೂ, ಎಂದೂ ಯಥಾ ಸಂಭವವಾಗಿ ಈ ವ ರಿ ಶೆ ಗ ಳ ಲ್ಲಿ ಇವುಗಳಿಗೆ ಅರ್ಥವನ್ನು ಹೇಳಬೇಕು.

೧೦ "ಸಹಪತ್ನ್ಯಾ ವಿಶಾಲಾಕ್ಷ್ಯಾ ನಾರಾಯಣಮುಪಾಗಮತ್" ಎಂಬಂತೆ ವಿಭವಾವತಾರವಾದ ಶ್ರೀರಾಮನೂ, ಅವನಿಗೆ ಅರ್ಚಾಮೂರ್ತಿ ಯಾದ ಶ್ರೀರಂಗನಾಥ ದೇವರೂ ಧರ್ಮ್ಯೈಕ್ಯದಿಂದ ಒಬ್ಬರೇ ಆಗಿದ್ದರೂ ವಿಗ್ರಹ ಭೇದದಿಂದ ಬೇರೆ ಬೇರೆಯವರು ಎಂದು ಹೇಳುವಂತೆ ಈ ಸ್ಥಳದಲ್ಲೂ ಪ್ರಥಮಾವತಾರವಾದ ವಿಷ್ಣ್ವವತಾರವೂ, ಆ ಅವತಾರಕ್ಕೆ ಮೂಲಭೂತನಾದ ಕ್ಷೀರಾರ್ಣವಶಾಯಿಯೂ, ಆತನಿಗೆ ಆಶ್ರಯಭೂತ ನಾದ ವೈಕುಂಠನಾಥನೂ ಧರ್ಮ್ಯೈಕ್ಯದಿಂದ ಭೇದವಿಲ್ಲದೆ ಏಕ ತತ್ವವಾಗಿ ಒಬ್ಬರೇ ಆಗಿದ್ದರೂ ವಿಗ್ರಹ ಭೇದದಿಂದ ಈ ಮೂವರಿಗೂ ಗುರುತ್ವ, ಪರಮಗುರುತ್ವ, ಸರ್ವಗುರುತ್ವಗಳನ್ನು ವಿವರಿಸಿರುವುದು.

ಈ ರೀತಿಯಲ್ಲಿ ಈ ಗುರುಪರಂಪರೆಯು ಆರೋಹಣ ಕ್ರಮದಲ್ಲಿ "ಆಚಾರ್ಯಾಣಾಮಸಾವಸಾವಿತ್ಯಾಭಗವತ್ತಃ" ಎಂದು ಸ್ವಾಚಾರ್ಯ ರಿಂದ ಭಗವಂತನವರೆಗೆ ಹೋಗಿ ಮುಟ್ಟುವುದು.

೧. ಶ್ರೀರಾಮಾನುಜಾಚಾರ್ಯರಿಗೆ ಅನಂತರದ ನಾಯಕರನ್ನಿಟ್ಟು ಕೊಂಡು "ರಾಮಾನುಜ ಪದಚ್ಛಾಯಾ" ಎನ್ನುವಂತೆ ರಾಮಾನುಜ ಪದ ಪಂಕಜಾಶ್ರಿತರಾದವರಿಗೆ ತಂಗುವ ಸ್ಥಳವಾಗಿ ಉತ್ತಾರಕವಾಗಿರುವಂತೆ ಗುರುಪರಂಪರಾನುಪ್ರವಿಷ್ಟರಾದ **ಎಂಬಾರ್** ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಅದರಲ್ಲಿ ಗುರು, ಪರಮಗುರು, ಸರ್ವಗುರು ಪದ ಬ ಹು ವ ಚ ನ ಪ್ರತಿಪಾದ್ಯರು ಗೋ ಬಲೀವರ್ದ ನ್ಯಾಯದಿಂದ [ಗೋ—ಹಸು, ಬಲೀವರ್ದ—ಎತ್ತು. ಇವುಗಳು ಬೇರೆ ಬೇರೆಯಾದರೂ ಒಂದೇ ಜಾತಿಗೆ ಸೇರಿದವು ಪಶು ಎಂಬಂತೆ] ಪಿಳ್ಳಾನ್, ಕೂರತ್ತಾಳ್ವಾನ್,

ಮುದಲಿಯಾಂಡಾರ್, ಅನಂದಾಳ್ವಾರ್ ಇವರುಗಳೂ, ಅಲ್ಲದೆ ಇವರುಗಳಿಗೆ ಅಭಿಮತರಾಗಿರುವ ಶ್ರೀವೈಷ್ಣವರುಗಳೂ ಎಂದೂ, ಹಿಂದೆ ಹೇಳಿದಂತೆಯೇ ಇಲ್ಲಿಯೂ ಸಹ ವಿಮರ್ಶನೆಯಿಂದ ವಿಭಜಿಸಿ ಅರ್ಥವನ್ನು ತಿಳಿದು ಹೇಳಬೇಕು.

೨. ಅದೇ ರೀತಿಯಲ್ಲಿ ಎಂಬಾರ್ರ ಚರಣಕಮಲಗಳಲ್ಲಿ ಆಶ್ರಯಿಸಿದ **ಶ್ರೀಪರಾಶರಭಟ್ಟರು** ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಗುರು, ಪರಮಗುರು, ಸರ್ವಗುರು ಪದ ಬಹುವಚನ ಪ್ರತಿಪಾದ್ಯರು ಕ್ರಮವಾಗಿ ಎಂಬಾರ್ರೂ, ಕೂರತ್ತಾಳ್ವಾರೂ, ಮೊದಲಿಯಾಂಡಾರೂ, ಪಿಳ್ಳೈ ಎಂಬುವರೂ ಎಂದೂ, ಅಲ್ಲದೆ ಇವರುಗಳಿಗೆ ಅಂತರಂಗರಾಗಿರುವ ಶ್ರೀವೈಷ್ಣವರೂ ಎಂದೂ, ಪೂರ್ವದಂತೆಯೇ ಇಲ್ಲಿಯೂ ವಿಭಜಿಸಿ ಸಂಬಂಧವನ್ನು ಹೇಳಬೇಕು—

೩. ಅದೇ ರೀತಿಯಲ್ಲಿ ಭಟ್ಟರ ಚರಣಕಮಲಗಳಲ್ಲಿ ಆಶ್ರಯಿಸಿದ **ನಂಜೀಯರು** ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಇದರಲ್ಲಿ ಗುರು, ಪರಮಗುರು, ಸರ್ವಗುರು ಪದ ಬಹುವಚನ ಪ್ರತಿಪಾದ್ಯರು ಭಟ್ಟರೂ, ಕೂರತ್ತಾಳ್ವಾರೂ, ಎಂಬಾರ್ರೂ, ಪಿಳ್ಳೈ, ಆಂಡಾರ್ ಮೊದಲಾದವರೆಂದೂ ಮೇಲೆ ತಿಳಿಸಿದಂತೆಯೇ ಯಥಾಸಂಭವವಾಗಿ ಇಲ್ಲಿಯೂ ವಿಭಜಿಸಿ ಸಂಬಂಧವನ್ನು ಹೇಳಬೇಕು—

೪. ಅಂತೆಯೇ ನಂಜೀಯರ ತಿರುವಡಿಗಳಲ್ಲಿ ಆಶ್ರಯಿಸಿದ **ನಂಬಿಳ್ಳೈಯುವರು** ಈ ವಾಕ್ಯ ತ್ರಯವನ್ನು ಅನುಸಂಧಿಸುವಾಗ ಇದರಲ್ಲಿ ಗುರು, ಪರಮಗುರು, ಸರ್ವಗುರುಪದ ಬಹುವಚನ ಪ್ರತಿಪಾದ್ಯರು ಕ್ರಮವಾಗಿ ನಂಜೀಯರೂ, ಭಟ್ಟರೂ, ಎಂಬಾರ್ರೂ, ಪಿಳ್ಳೈರೂ ಎಂದೂ ಅವರುಗಳಿಗೆ ಸಬ್ರಹ್ಮಚಾರಿಗಳಾಗಿಯೂ, ವಿದ್ಯಾವಂತರಾಗಿಯೂ, ಸಂಪ್ರದಾಯವನ್ನು ತಿಳಿದವರಾಗಿ ಶ್ರೀಭಾಷ್ಯಕಾರರ ಆಜ್ಞೆಯನ್ನು ಪರಿಪಾಲಿಸುವ ಹಿರಿಯರೆಂದೂ ಈ ರೀತಿಯಲ್ಲಿ ವಿಭಜಿಸಿ ಅರ್ಥವನ್ನು ಹೇಳಬೇಕು.

ಹೀಗಿದ್ದರೂ ಅವರೋಹಣ ಕ್ರಮದಲ್ಲಿ ಹೇಳುವಾಗ "ಇರಾಮುನು ಶನ್ರಾಳ್ ಪಿಡಿತ್ತಾರ್ ಪಿಡಿತ್ತಾರ್ರೈಪ್ಪತ್ತಿ" ಎಂಬಂತೆ ಈ ಆಚಾರ್ಯರ ಪರಂಪರಾವೃಕ್ಷವು ಮೇಲೆ ಮೇಲಕ್ಕೆ ಚಿಗುರಿಬಿಟ್ಟು ಹರಡಿಕೊಂಡು ಹೋಗೋಣದರ ದೆಸೆಯಿಂದ ನಂಬಿಳ್ಳೈಯವರ ತಿರುವಡಿಗಳಲ್ಲಿ ಆಶ್ರಯಿಸಿದ **ವಡಕ್ಕು ತ್ತಿರುವೀಧಿಪ್ಪಿಳ್ಳೈಯೂ,** ಅವರ ತಿರುವಡಿಗಳಲ್ಲಿ ಆಶ್ರಯಿಸಿದ **ಪಿಳ್ಳೈಲೋಕಾಚಾರ್ಯರೂ,** ಅವರ ತಿರುವಡಿಗಳಲ್ಲಿ ಆಶ್ರಯಿಸಿದ **ತಿರುವಾಯ್ಮೊಳಿಪ್ಪಿಳ್ಳೈಯೂ,** ಅವರ ತಿರುವಡಿಗಳಲ್ಲಿ ಆಶ್ರಯಿಸಿದ **ಪೆರಿಯಜೀಯರೂ** (ಮಣವಾಳ ಮಹಾಮುನಿಗಳು) ಸಹ ಅವರವರು ಈ ವಾಕ್ಯತ್ರಯವನ್ನು ಅನುಸಂಧಿಸುವಾಗ ಈ ವಾಕ್ಯತ್ರಯದಲ್ಲಿ ಗುರು ಪರಮಗುರು, ಸರ್ವಗುರು ಪದ ಬಹುವಚನ ಪ್ರತಿಪಾದ್ಯರು ಇವರಿವರೆಂದು ತಿಳಿಸುವುದು ಆಯಾ ಆಚಾರ್ಯರುಗಳ ನಾಮಧೇಯದಿಂದ ತಿಳಿದು ಕೊಳ್ಳುವುದು.—

ಅಂತೆಯೇ ಬಹುವಚನ ಪ್ರತಿಪಾದ್ಯರು ಅವರವರಿಗೆ ಜೀವನಾಧಾರ ವಾಗಿಯೂ ಮತ್ತು ಹೆಚ್ಚಾಗಿ ಸ್ಮರಿಸತಕ್ಕವರಾಗಿಯೂ, ಒಂದಾನೊಂದು ಬಳ್ಳಿಯು ಪಕ್ಕದಲ್ಲೇ ಬೆಳೆದು ಆಯಾ ಕೊಂಬೆಗಳಿಗೆ ಸುತ್ತಿಕೊಂಡು ಮೇಲೆ ಮೇಲಕ್ಕೆ ಹೋಗಿ ಹರಡುವಂತೆ ಅವರವರ ಆಚಾರ್ಯರುಗಳ ಚರಣಕಮಲಗಳಲ್ಲಿ ಆಶ್ರಯಿಸಿದ, ಆಶ್ರಯಿಸುವಂತೆ ಮಾಡಿರುವ ಮತ್ತು ಮಾಡುವ ಶ್ರೀವೈಷ್ಣವರೂ ಸಹ ಈ ಗುರು ಪರಮಗುರು, ಸರ್ವಗುರುಗಳಲ್ಲಿ ಸೇರಿಕೊಂಡೇ ಇರುತ್ತಾರೆ. ಬೇರೆಯಾಗಿ ಎಂದಿಗೂ ಪರಿಗಣಿಸಲ್ಪಡು ವುದೂ ಇಲ್ಲ, ಬಿಡಲ್ಪಟ್ಟಿರುವುದೂ ಇಲ್ಲ. ಎಂದು ತಿಳಿಯಬೇಕು.

ಈ ರೀತಿಯಲ್ಲಿ ಈ ಗುರುಪರಂಪರೆಯು ಶ್ರಿಯಃಪತಿಯಿಂದ ಸ್ವಾಚಾರ್ಯರವರೆಗೆ ಬಂದು ಸೇರುವುದು.

ಭಗವಂತನ ಚರಣಾರವಿಂದಗಳನ್ನಾಶ್ರಯಿಸಲು ಪ್ರಪತ್ತಿಮಾರ್ಗವು ಮೆಟ್ಟಿಲು ಮೆಟ್ಟಿಲಾಗಿ ಕ್ರಮವಾಗಿ ಕಡೆಯವರೆಗೂ ಇಳಿದು ಬಂದಿರುವು ದರಿಂದ ಈ ಗುರುಪರಂಪರಾ ಮೆಟ್ಟಿಲುಗಳನ್ನು ಕ್ರಮ ಕ್ರಮವಾಗಿ

ಹತ್ತಿಯೇ ಭಗವಂತನನ್ನು ಆಶ್ರಯಿಸ ಬೇಕಾಗಿರುವುದು. ಎಂದರೆ ಯಾರೊಬ್ಬರನ್ನು ಹಿಡಿದುಕೊಂಡು ಮಿಕ್ಕ ಆಚಾರ್ಯರನ್ನೂ, ಗುರು ಸಮಾನರನ್ನೂ ಬಿಟ್ಟು ಅವರನ್ನು ಅನುಸಂಧಿಸದೆಯೂ ಹಾಗೆಯೇ ದಾಟಿ ಹೋಗುತ್ತೇನೆಂಬುದು ಅಸಾಧ್ಯವು.

## ಸಂಪ್ರದಾಯಭೇದವು

ಈ ರಹಸ್ಯತ್ರಯೋಪದೇಶವು ಶ್ರಿಯಃಪತಿಯಿಂದ ಕ್ರಮವಾಗಿ ಯಾವ ಭೇದವೂ ಇಲ್ಲದೆ ಏಕಮುಖವಾಗಿ ನಡೆದು ಬಂದಿರುವುದು.

ಶ್ರೀರಾಮಾನುಜಾಚಾರ್ಯರ ನೇತೃತ್ವದಲ್ಲಿ ಶ್ರೀವೈಷ್ಣವ ಸಮೃದ್ಧಿಯು ಅಧಿಕವಾದ್ದರಿಂದ, ವಿಶಿಷ್ಟಾದ್ವೈತ ಪ್ರಚಾರಕ್ಕಾಗಿ ೭೪ ಸಿಂಹಾಸನಾಧಿಪತಿಗಳನ್ನು ಅನೇಕ ಸ್ಥಳಗಳಿಗೆ ಕಳುಹಿಸಿದರು. ಅವರವರು ಅಲ್ಲಲ್ಲೇ ಶಿಷ್ಯಪ್ರಶಿಷ್ಯರಾಗಿ ನೆಲಸಿ ಬಿಟ್ಟದ್ದರಿಂದಲೂ ತದನುಗುಣವಾಗಿ ಶ್ರೀವೈಷ್ಣವ ಸಮೃದ್ಧಿಯು ಅಧಿಕವಾಗಿ ಆಚಾರ್ಯ ಶಿಷ್ಯತ್ವ ಸಂಖ್ಯೆಯು ಅಧಿಕವಾದ್ದರಿಂದಲೂ ಸಂಪ್ರದಾಯ ಭೇದವು ಕಂಡು ಬರುವುದು.

ಈ ರೀತಿಯಲ್ಲಿ ಉಂಟಾದ ವ್ಯತ್ಯಾಸದಲ್ಲಿ ೧. ಒಂದು ಭಾಗದವರು ಎಂದರೆ ಆಳವಂದಾರ್ರ ಶಿಷ್ಯ ಪ್ರಶಿಷ್ಯರಾಗಿ ಬಂದು, ಶ್ರೀರಾಮಾನುಜಾಚಾರ್ಯರ ಸಂಬಂಧವಿಲ್ಲದೇ ಇರುವವರೂ ಸಹ ಕಾಣುವರು. ಅವರೂ ನಿಯಮವನ್ನನುಸರಿಸಿ ಶ್ಲೋಕ ಮತ್ತು ವಾಕ್ಯ ಗುರು ಪರಂಪರೆಯನ್ನು ಅನುಸಂಧಿಸಿಯೇ ರಹಸ್ಯ ತ್ರಯ ಮಂತ್ರವನ್ನು ಅನುಸಂಧಿಸಿ ಬರುವವರಾಗಿರುವರು.

೨. ಇನ್ನೊಂದು ಭಾಗದವರು ಶ್ರೀರಾಮಾನುಜಾಚಾರ್ಯರ ಶಿಷ್ಯರಾಗಿದ್ದು ೭೪ ಜನ ಪೀಠಾಧಿಪತಿಗಳಾಗಿ ಬೇರೆ ಬೇರೆ ಸ್ಥಳಕ್ಕೆ ಹೊರಟು ಹೋದ್ದರಿಂದ ಅವರ ಶಿಷ್ಯ ಪ್ರಶಿಷ್ಯರು ಶ್ರೀರಾಮಾನುಜಾಚಾರ್ಯರಿಂದ ಹಿಂದಕ್ಕೆ ಗುರು ಪರಂಪರೆಯನ್ನು ಅನುಸಂಧಿಸುವರು

ಉದಾ— **ಶ್ರೀ ಸೋಮಯಾಜಿಯಾಂಡಾ‌ರ್** ಅವರ ಶಿಷ್ಯರೇ ಮೊದಲಾದವರು.

೩. ಮೂರನೆಯ ಭಾಗದವರು **ಶ್ರೀಅಹೋಬಿಲ ಮಠ** ಮತ್ತು ಯಾವತ್ತು ಶಿಷ್ಯರೂ, ಇವರು ಕ್ರಮವಾಗಿ ಎಂಬಾರ್, ಭಟ್ಟರು ನಂಜೀಯರು, ನಂಪಿಳ್ಳೈ ವಡಕ್ಕು ತ್ತಿರುವೀಧಿಪ್ಪಿಳ್ಳೈಯೂ, ಅವರ ತಿರುವಡಿಗಳಲ್ಲಿ ಆಶ್ರಯಿಸಿದವರು ಶ್ರೀರಂಗಾಚಾರ್ಯರು. ಅವರಲ್ಲಿ ಆಶ್ರಯಿಸಿದವರು ಕೇಶವಾರ್ಯರು. ಅವರಲ್ಲಿ ಆಶ್ರಯಿಸಿದವರು ಕಮಲಾವಾಸರು (ಶ್ರೀನಿವಾಸಾಚಾರ್ಯರು). ಅವರಲ್ಲಿ ಆ ಶ್ರ ಯಿ ಸಿ ದ ವ ರು ಕೇಶವಾರ್ಯರು; ಅವರಲ್ಲಿ ಆಶ್ರಯಿಸಿದವರು **ಶ್ರೀಮದಾದಿ ವಣ್ ಶಠಕೋಪ ಯತೀಂದ್ರರು.** ಈ ವರಿಶೆಗಳಲ್ಲಿ ಅನುಸಂಧಿಸುವರು.

ಇನ್ನೊಂದು ಭಾಗದವರು ಈ ಕೆಳಗೆ ಕಂಡ ರೀ ತಿ ಯ ಲ್ಲಿ ಅನುಸಂಧಿಸುವರು.

ಶ್ರೀರಾಮಾನುಜಾಚಾರ್ಯರ ತಿರುವಡಿಗಳನ್ನಾಶ್ರಯಿಸಿದವರು ಕಿಡಾಂಬಿಯಾಚ್ಚಾರ್ (ಪ್ರಣತಾರ್ಥಿಹರಾಚಾರ್ಯರು.) ಅವರಲ್ಲಿ ಆಶ್ರಯಿಸಿದವರು ಆತ್ರೇಯ ರಾಮಾನುಜಾಚಾರ್ಯರು. ಅವರ ತಿರುವಡಿಗಳನ್ನಾಶ್ರಯಿಸಿದವರು ಶ್ರೀರಂಗರಾಜರು. ಅವರ ತಿರುವಡಿಗಳನಾಶ್ರಯಿಸಿದವರು ವಾದಿಹಂಸಾಂಬುವಾಹಾರ್ಯರು. ಅವರ ತಿರುವಡಿಗಳನ್ನಾಶ್ರಯಿಸಿದವರು **ಶ್ರೀವೇದಾಂತ ಮಹಾದೇಶಿಕರು.**

ಇಲ್ಲಿಂದ ಮುಂದೆ ಬಹು ಮುಖವಾಗಿ ಸ್ವಾಚಾರ್ಯರ ವರೆಗೆ ಅನುಸಂಧಿಸಲ್ಪಡುವುದು.



| | | |
|---|---|---|
| ೧ | ಶ್ರೀಮತೇ ರಾಮಾನುಜಾಯ ನಮಃ | ಸವಿಭಕ್ತಿಕಮತುಪ್ |
| ೨ | ಶ್ರೀಪರಾಂಕುಶದಾಸಾಯ ನಮಃ. | ಮತುಪ್ರತ್ಯಯರಹಿತವು |
| ೩ | ಶ್ರೀಮದ್ಯಾಮುನಮುನಯೇ ನಮಃ | ಲುಪ್ತವಿಭಕ್ತಿಕಮತುಪ್ |
| ೪ | ಶ್ರೀರಾಮಮಿಶ್ರಾಯ ನಮಃ | ಮತುಪ್ರತ್ಯಯರಹಿತವು |
| ೫ | ಶ್ರೀಪುಂಡರೀಕಾಕ್ಷಾಯ ನಮಃ | ಮತುಪ್ರತ್ಯಯರಹಿತವು |
| ೬ | ಶ್ರೀಮನ್ನಾಥಮುನಯೇ ನಮಃ | ಲುಪ್ತವಿಭಕ್ತಿಕಮತುಪ್ |
| ೭ | ಶ್ರೀಮತೇ ಶಠಕೋಪಾಯ ನಮಃ | ಸವಿಭಕ್ತಿಕಮತುಪ್ |
| ೮ | ಶ್ರೀಮತೇ ವಿಷ್ವಕ್ಸೇನಾಯ ನಮಃ | ಸವಿಭಕ್ತಿಕಮತುಪ್ |
| ೯ | ಶ್ರಿಯೈ ನಮಃ | |
| ೧೦ | ಶ್ರೀಧರಾಯ ನಮಃ | |

**ಶ್ರೀಮತೇ ರಾಮಾನುಜಾಯ ನಮಃ** ಇತ್ಯಾದಿ ಹತ್ತು ವಾಕ್ಯಗಳಲ್ಲಿ ಮೊದಲಿನ ಎಂಟು ವಾಕ್ಯಗಳಲ್ಲಿಯೂ **ಶ್ರೀ** ಶಬ್ದವು "ನಜ್ಞಾನತುಲ್ಯಂ ಕಥಮಸ್ತಿಕಿಂಚಿತ್'' ಎಂದೂ, "ಭಗವದ್ಭಕ್ತಿ ರೇವಾತ್ರ ಪ್ರಪನ್ನಾನಾಂ ಮಹಾಧನಮ್" ಎನ್ನುವಂತೆ ಜ್ಞಾನಭಕ್ತಿಗಳೆಂಬ ಐಶ್ವರ್ಯಕ್ಕೆ ವಾಚಕವಾಗಿರುವುದು. (ವಾಚಕ—ಪ್ರತಿಪಾದಕಪದ)

ಇದರಲ್ಲಿ ಕೆಲವು ವಾಕ್ಯಗಳಲ್ಲಿ ಶ್ರೀ ಶಬ್ದವು ಸವಿಭಕ್ತಿಕ ಮತುಪ್ ಪ್ರತ್ಯಯೋಪೇತವಾಗಿಯೂ, ಇನ್ನು ಕೆಲವು ವಾಕ್ಯಗಳಲ್ಲಿ ಲುಪ್ತ ವಿಭಕ್ತಿಕ ಮತುಪ್ ಪ್ರತ್ಯಯೋಪೇತವಾಗಿಯೂ, ಇನ್ನು ಕೆಲವು ವಾಕ್ಯಗಳಲ್ಲಿ ಮತುಪ್ ಪ್ರತ್ಯಯ ರಹಿತವಾಗಿಯೂ, ಇದೇ ರೀತಿಯಲ್ಲಿ ವೈರೂಪ್ಯದಿಂದ ನಿರ್ದೇಶಿಸಲು ನಿಬಂಧಿಸಲ್ಪಟ್ಟಿದೆ.

ಕೆಲವರ ಜ್ಞಾನಭಕ್ತಿಗಳು ಅತ್ಯಂತ ವಿಶದವಾಗಿಯೂ, ಇನ್ನು ಕೆಲವರ ಜ್ಞಾನಭಕ್ತಿಗಳು ಮಧ್ಯಮ ವಿಶದವಾಗಿಯೂ, ಮತ್ತೆ ಕೆಲವರ ಜ್ಞಾನಭಕ್ತಿಗಳು ವಿಶದಂಗಳಾಗಿಯೂ ಇರುವುದು.

ಅದು ಹೇಗೆಂದರೆ ಶ್ರೀ ಮಹಾಲಕ್ಷ್ಮಿಯ ತಿರುವಡಿಗಳನ್ನು ಆಶ್ರಯಿಸಿದ ಸೇನೆಮೊದಲಿಯಾರ್ರು ಮತ್ತು ಅವರ ತಿರುವಡಿಗಳನ್ನಾಶ್ರಯಿಸಿದ

ನಮ್ಮಾಳ್ವಾರ್ಯರ ಮತ್ತು ಅವರ ಚರಣಾರವಿಂದಗಳನ್ನಾಶ್ರಯಿಸಿ ಉಜ್ಜೀವಿತರಾದ ಶ್ರೀರಾಮಾನುಜಾಚಾರ್ಯರ ಜ್ಞಾನಭಕ್ತಿಗಳು ವಿಶದತಮಂಗಳಾಗಿರುವುವು—(ಅತ್ಯನ್ತ ವಿಶದವಾಗಿರುವುವು.)

ನಮ್ಮಾಳ್ವಾರ್‌ರಲ್ಲಿ ಅತಿ ಪ್ರೀತಿಯುಳ್ಳವರಾದ ನಾಥಮುನಿಗಳ ಮತ್ತು ಅವರ ತಿರುವಡಿಗಳನ್ನಾಶ್ರಯಿಸಿದ ಯಾಮುನಾಚಾರ್ಯರ ಜ್ಞಾನಭಕ್ತಿಗಳು ವಿಶದತರವಾಗಿರವುವು—(ಮಧ್ಯಮ ವಿಶದಂಗಳಾಗಿರುವುವು)

ಶೀಲವಂತರಲ್ಲಿ ಅಗ್ರಗಣ್ಯರಾದ ನಾಥಮುನಿಗಳ ಶೀಲಗುಣಾದಿಗಳನ್ನು ತಿಳಿದು ಉಪದೇಶಿಸುವವರಾದ ಉಯ್ಯಕೊಂಡಾರ್ರ ಮತ್ತು ಅವರ ಶಿಷ್ಯರಾದ ಮಣಕ್ಕಾಲ್‌ನಂಬಿಗಳ ಅವರ ಶಿಷ್ಯರಾದ ಪೆರಿಯ ನಂಬಿಗಳ ಈ ಮೂವರ ಜ್ಞಾನಭಕ್ತಿಗಳು ವಿಶದಂಗಳಾಗಿರುವುವು—

ಮೇಲೆ ಹೇಳಿದ ಈ ಆಚಾರ್ಯರುಗಳ ಜ್ಞಾನಭಕ್ತಿಗಳು ಏಕರೂಪವಾಗಿರದೆ ಈ ರೀತಿ ಭೇದಭಾವನೆ (ವ್ಯತ್ಯಾಸ) ಯಿಂದ ಕೂಡಿರಲು ಕಾರಣವೇನೆಂದರೆ—

ಸೇನೆಮೊದಲಿಯಾರ್ರ ಮತ್ತು ನಮ್ಮಾಳ್ವಾರುಗಳ, ಜ್ಞಾನಭಕ್ತಿಗಳಿಂದ ಕೂಡಿದ ಪ್ರಪತ್ತಿಮಾರ್ಗವು ವಿಷ್ವಕ್ಸೇನ ಸಂಹಿತೆಯಲ್ಲಿ ವಿಶದೀಕರಿಸಿ ಹೇಳಲ್ಪಟ್ಟಿರುವುದರಿಂದಲೂ,

ಚೇತನರ ಕ್ಷೇಮಕ್ಕಾಗಿಯೇ ಭಗವಂತನು ಪಾಡು ಪಡುವನೆಂಬ ಅವನ ಸೌಶೀಲ್ಯ ವಾತ್ಸಲ್ಯಾದಿ ಗುಣಗಳನ್ನು ಲೋಕಕ್ಕೆ ವಿಶದವಾಗಿ ತಿಳಿಯಪಡಿಸಿರುವುದರಿಂದಲೂ, "ಪ್ರಿಯೇಣ ಸೇನಾಪತಿನಾ ನಿವೇದಿತಂ ತಥಾನುಜಾನಂತ ಮುದಾರ ವೀಕ್ಷಣೈಃ" ಎಂದೂ, ಅವನು ಕರುಣಿಸಿದ ವೇದಾಂತಾರ್ಥವನ್ನು (ದ್ರಾವಿಡ ಗಾಥಾ) ತಿರುವಾಯ್ಮೊಳಿ ರೂಪದಲ್ಲಿ ನಮಗೆ ಅನುಗ್ರಹಿಸಿರುವುದರಿಂದಲೂ, ಅಲ್ಲದೆ "ಅಡಿಕ್ಕೀಳಮರರ್‌ನ್ದು ಪುಕಂದೇನೇ" ಎಂದೂ, ಪ್ರಪತ್ತಿ ಮಾರ್ಗವನ್ನು ಅನೇಕ ವಿಧದಲ್ಲಿ ತಾವುಗಳು ಆಚರಿಸಿಯೂ, ಉಪದೇಶ ಮೂಲಕ ತೋರಿಸಿ ಕೊಟ್ಟಿರುವು

ದರಿಂದಲೂ, "ಉಯರ್‌ವರ ಉಯರ್‌ನಲ ಮು ಡೈ ಯ ವ ನ್ — ಮಯರ್ವಱ ಮತಿನಲ ಮರುಳಿನ್" "ಕಣ್ಣನ್ ದೇವರ್ಕುಂ ದೇವಾ" ಎಂಬುದಾಗಿ ಭಗವಂತನ ನಿರ್ಹೇತುಕ ಅನುಗ್ರಹ ವರಿಶೆಗಳನ್ನು ನಮಗೆ ವಿಶದವಾಗಿ ತಿಳಿಸಿರುವುದರಿಂದಲೂ,

"ಉಮ್ಮೈಯರ್ ವೀಡುಡೈಯರ್ಾ" ಯಾನೇ ನೀಯೆನ್ನುಡೈವ್ಯೆಯುಂ ನೀಯೇ" "ತೊಂಡರ್ ತೊಂರ್ಡ" ಎಂದೂ, ಭಕ್ತನು ನಡೆದುಕೊಳ್ಳುವ ಮಾರ್ಗವನ್ನು ಅನೇಕ ವಿಧಗಳಲ್ಲಿ ತಿಳಿಸಿರುವುದರಿಂದಲೂ,

ಅಲ್ಲದೆ ಪಿರಾಟ್ಟಿಯು [ಶ್ರೀಲಕ್ಷ್ಮೀದೇವಿಯು] ಅಭಯದ ಮಾತುಗಳನ್ನೂ ಭಗವಂತನ ನೇರವಾದ ಮಾತುಗಳನ್ನೂ ನಮಗೆ ವಿಶದವಾಗಿ ಅರ್ಥವಾಗುವಂತೆ ತಿಳಿಸಿರುವುದರಿಂದ ಅವರ ಜ್ಞಾನಗಳು ವಿಶದತಮಂಗಳಾಗಿ [ಅತ್ಯಂತ ವಿಶದವಾಗಿ] ರುವುದು.

ಶ್ರೀಭಾಷ್ಯಕಾರರ ಜ್ಞಾನ ಭಕ್ತಿಗಳು "ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ" ಎಂಬುದಾಗಿ ತಾವೂ, "ಅಚ್ಯುತ ಪದಾಂಬುಜ ಯುಗ್ಮರುಕ್ಮ ವ್ಯಾಮೋಹತಃ" ಎಂಬುದಾಗಿ ಕೂರತ್ತಾಳ್ವಾರೂ ಅಪ್ಪಣೆ ಕೊಡಿಸಿರುವಂತೆ ಇರುವವುಗಳಾಗಿಯೂ, ಗದ್ಯತ್ರಯ, ಮತ್ತು ಶ್ರೀಭಾಷ್ಯ ಗ್ರಂಥಗಳ ಮೂಲಕ ಶರಣಾಗತಿಶಾಸ್ತ್ರ, ಭಕ್ತಿ ಶಾಸ್ತ್ರಗಳನ್ನು ಕ್ರಮವಾಗಿ ಯಥಾಕಾಲದಲ್ಲಿ ಪ್ರಕಾಶ ಪಡಿಸಿರುವುದರಿಂದಲೂ, ತಮ್ಮ ವಿಶೇಷ ಪ್ರತಿಭೆಯಿಂದಲೂ, ತಾದಾತ್ಮಿಕ ಚಿಂತನಾ ಭಾವನೆಗಳಿಂದಲೂ, ಪ್ರತಿವಾದಿಗಳಿಗೆಲ್ಲಾ ಮತ ವಿಚಾರದಲ್ಲಿ ಭಯಂಕರರಾಗಿಯೂ, ತಮಗಿಂತಲೂ ಬಹಳ ಹಿಂದೆ ಜೀವಂತೆಯಾಗಿದ್ದು ಶ್ರೀಕೃಷ್ಣನೇ ತನ್ನ ಪತಿಯೆಂದು ಕೊಂಡಾಡಿ ಅವನಲ್ಲಿ ಐಕ್ಯಳಾದ ಶ್ರೀಗೋದಾದೇವಿಯ ಅಂತರಂಗ ಭಾವವನ್ನು ಅರಿತು ಅಳಕರ್ ಬೆಟ್ಟದಲ್ಲಿ ದೇವರ ಕೈಂಕರ್ಯಗಳನ್ನು ನಡೆಸಿ ಶ್ರೀಗೋದಾದೇವಿಯ ಇಷ್ಟಾರ್ಥವನ್ನು ಪೂರೈಸಿದುದರಿಂದಲೂ, ಅಲ್ಲದೆ ಶ್ರೀಗೋದಾದೇವಿಯ ಮುಖ್ಯ ಪ್ರಬಂಧವಾದ ತಿರುಪ್ಪಾವೈ ಎಂಬುದನ್ನು ನಿತ್ಯದಲ್ಲೂ ತಾವು ಅನುಸಂಧಿಸಿಯೂ, ಅದೆ ಪ್ರಕಾರ ಪ್ರತಿನಿತ್ಯವೂ ಶ್ರೀವೈಷ್ಣವರೆಲ್ಲರೂ ಅನುಸಂಧಿಸಬೇಕೆಂದು

ಆ ದೇವಿಯ ಅನುಗ್ರಹವನ್ನು ನಮಗೆ ಮಾಡಿ ಕೊಟ್ಟಿರುವುದರಿಂದಲೂ, ಶ್ರೀ ಆಳವಂದಾರ್ರ ಚರಮ ವಿಗ್ರಹದ ಮೂರು ಕೈ ಬೆರಳುಗಳನ್ನು ಮಡಿಸಿರುವುದರ ಭಾವವನ್ನರಿತು ಅವುಗಳನ್ನು ತಾವು ನಡೆಸಿಕೊಟ್ಟು ಅವರ ಅಂತಿಮ ಮನೋವ್ಯಥೆಯನ್ನು ಹೋಗಲಾಡಿಸಿ ಅದನ್ನು ಸಂತೋಷ ಪೂರ್ವಕ ನಿರ್ವಹಿಸಿ ಕೊಡುವುದರ ದೆಸೆಯಿಂದಲೂ, ದೆಹಲೀ ನಗರಕ್ಕೆ ಹೋಗಿ ಅಲ್ಲಿನ ರಾಜನ ಮಗಳ ಅಂತಃಪುರದಲ್ಲಿದ್ದ ರಾಮಪ್ರಿಯರನ್ನು "ವರುಕ ವರುಕ ವರುಕವಿಂಗೇ ವಾಮನನಂಬಿ ವರುಕವಿಂಗೇ ಕರಿಯ ಕುಳಲ್ ಶೆಯ್ಯವಾಯ್ ಮುಕತ್ತೆ ಂಕಾಕುತ್ತನಂಬಿ ವರುಕ ವಿ ಂ ಗೇ" ಎಂಬಂತೆ ಶ್ರೀರಾಮಪ್ರಿಯರು ಓಡೋಡಿ ಅತಿ ವೇಗವಾಗಿ ಬಂದಾಗ ನನ್ನ ಸಂಪತ್ಕುಮಾರನೇ! ನನ್ನ ಮುದ್ದುಮಗನೇ! ಬಾ, ಬಾ ಎಂದು ಆ ದೇವ ದೇವೋತ್ತಮನಿಗೆ ನಾಮಕರಣ ಮಾಡಿ ತಮ್ಮ ಹೃದಯಕ್ಕೆ ಅಪ್ಪಿಕೊಳ್ಳುವ ಅಪೂರ್ವ ಶಕ್ತಿಯಿಂದ ಕೂಡಿರುವುದರಿಂದಲೂ,

"ಅತ್ಯುತ್ಕಟ್ಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ" ಎಂಬಂತೆ ಕ್ರಿಮಿಕಂಠ ಚೋಳನು ಹೊಂದಿದ ಪಾಪಕರ್ಮಫಲ ವೃತ್ತಾಂತವನ್ನು ಮೇಲುಕೋಟೆಯ ಕಲ್ಯಾಣೀ ಪುಷ್ಕರಣೀ ತೀರದಲ್ಲಿರುವಾಗ ಇವರಲ್ಲಿಗೆ ಮತ್ತೊನ್ರಿಲ್ಲಾ ಮಾರುತಿಯಾಂಡಾರ್ರು ಬಂದು ವಿಜ್ಞಾಪಿಸಲು ಕೇಳಿ ರಾಜದಣ್ಡಧರನಾದ ಶ್ರೀರಂಗನಾಥರನ್ನು ಮಂಗಲಾಶಾಸನ ಮಾಡಲು ಅತಿ ಪ್ರೀತಿಯಿಂದ ಶ್ರೀರಂಗಕ್ಕೆ ಬಿಜಯ ಮಾಡಿಸುವ ಸಮಯದಲ್ಲಿ ಮೇಲುಕೋಟೆಯ ಶ್ರೀವೈಷ್ಣವರನ್ನೆಲ್ಲಾ ಶ್ರೀಮನ್ನಾರಾಯಣ ದೇವರ ಸನ್ನಿಧಿಯಲ್ಲಿ ಕೈಂಕರ್ಯ ನಿರತರನ್ನಾಗಿ ಮಾಡಿ ನಿಯಮಿಸಿದುದೂ, ತಮ್ಮ ದಿವ್ಯಶಕ್ತಿ ಪೂರಿತವಾದ ವಿಗ್ರಹವನ್ನು ಅವರಿಗೆ ಅನುಗ್ರಹಿಸಿದುದೂ ಅಲ್ಲದೆ ಅನೇಕ ಗ್ರಾಮ, ಆಲಯ, ತಟಾಕಾದಿಗಳನ್ನು ಜೀರ್ಣೋದ್ಧಾರ ಮಾಡಿ ವಿಶಿಷ್ಟಾದ್ವೈತ ವೇದಾಂತ ಪ್ರಚಾರದಿಂದ ಸನಾತನ ಧರ್ಮದ ಸಂಪ್ರದಾಯ ಕ್ರಮವನ್ನು ಸರಿಯಾದ ವ್ಯವಸ್ಥೆಯಲ್ಲಿ ತಂದುದರಿಂದಲೂ,

ಈ ರೀತಿಯಲ್ಲಿ ಮೇಲೆ ತಿಳಿಸಿದ ವಿಷಯಗಳೆಲ್ಲವೂ ದಡತುಂಬಿ ಹರಿಯುವ ಕಾವೇರೀ ನದಿಯ ಪ್ರವಾಹದಂತೆ ಇದ್ದು, ಎಣಿಸಲಾಗದ

ಆಶ್ರಿತರ ಗುಂಪನ್ನುಳ್ಳವರಾಗಿ ಇರುವುದರಿಂದ ಇವರ ಜ್ಞಾನ ಭಕ್ತಿಗಳು ವಿಶದತಮಂಗಳಾಗಿರುವುವು.

ಶ್ರೀಮನ್ನಾಥಮುನಿಗಳ ಮತ್ತು ಆಳವಂದಾರ್ರ ಜ್ಞಾನ ಭಕ್ತಿಗಳು ಇದೇ ರೀತಿಯಲ್ಲಿ ಅಷ್ಟು ವಿಶದವಾಗಿರದೆ ಶಿಷ್ಯ ಪರಂಪರಾ ಅನುಸಂಧಾನ ಮಾತ್ರದಿಂದಲೂ, ಕಾಲಾನುಸಾರವಾಗಿ ಕೆಲವು ಗ್ರಂಥ ಪ್ರಚಾರ ಮಾಡುವುದರಲ್ಲಿ ಮಾತ್ರ ಪರ್ಯವಸಾನವಾಗೋಣದರ ದೆಸೆಯಿಂದ ಅವರುಗಳ ಜ್ಞಾನವು ಮಧ್ಯಮ ವಿಶದವಾಗಿರುವುವು.

ಉಯ್ಯಕ್ಕೊಂಡಾರ್ರ, ಮಣಕ್ಕಾಲ್‌ನಂಬಿಗಳ ಮತ್ತು ಪೆರಿಯ ನಂಬಿಗಳ ಈ ಮೂವರ ಜ್ಞಾನ ಭಕ್ತಿಗಳು ಮೇಲೆ ತಿಳಿಸಿದಂತೆ ಇಲ್ಲದೆ ಮೇಲಿನವರ ಸಾರವನ್ನು ಮಾತ್ರ ಗ್ರಹಿಸಿ ಮುಂದಿನವರಿಗೆ ಉಪದೇಶಿಸಿ ರೋಣದರ ಮಾತ್ರ ಇವರ ಜ್ಞಾನ ಭಕ್ತಿಗಳು ಪರಿಮಿತಂಗಳಾಗಿ ರುವುದರಿಂದ ವಿಶದಗಳಾಗಿರುವುವು.

೯. ಶ್ರಿಯೈನಮಃ ೧೦. ಶ್ರೀಧರಾಯ ನಮ: ಎನ್ನುವ ವಾಕ್ಯದ್ವಯದಲ್ಲಿ "ಶ್ರೀರಿತಿ ಪ್ರಥಮಾಭಿಧಾನಂ ಲಕ್ಷ್ಮ್ಯಾಃ'' ಎಂದೂ "ಶ್ರೀರಿತ್ಯೇವಚನಾಮತೇ'' ಎಂದೂ, ಪ್ರತಿಪಾದಿಸುವುದರಿಂದ **ಶ್ರೀ** ಶಬ್ದವು ಪೆರಿಯಪಿರಾಟ್ಟಿಗೆ (ಶ್ರೀಲಕ್ಷ್ಮೀದೇವಿಗೆ) ವಾಚಕವಾಗಿರುವುದು.

"ಶ್ರಿಯಂಧರತೀತಿ ಶ್ರೀಧರ:" ಎಂದು ಯೋಗ ವ್ಯುತ್ಪತ್ತಿಯಿಂದ ಶ್ರೀಮನ್ನಾರಾಯಣನಿಗೂ ಹೆಸರಾಗಿರುವುದು.

ಈ ರೀತಿಯಲ್ಲಿ ಹದಿಮೂರು ವಾಕ್ಯಗಳ ಮೊದಲಿನ ಮೂರು ವಾಕ್ಯಗಳೂ ವೇದಶಾಸ್ತ್ರ ರುಚಿ ಪರಿಗ್ರಹೀತಂಗಳಾಗಿರುವುವು. ಉಳಿದ ಹತ್ತು ವಾಕ್ಯಗಳೂ ಆಚಾರ್ಯ ರುಚಿ ಪರಿಗೃಹೀತಂಗಳಾಗಿರುವುವು.

ಅಪೌರುಷೇಯವಾಗಿಯೂ, ಪೌರುಷೇಯವಾಗಿಯೂ, ಇರುವ ರಹಸ್ಯ ತ್ರಯಕ್ಕೆ ಏಕಾವಯವತ್ವವನ್ನು ಹೇಳಿ ತೋರಿಸಿದಂತೆ ಅಪೌರು ಷೇಯವಾಗಿಯೂ, ಪೌರುಷೇಯವಾಗಿಯೂ ಇರುವ ಈ ಹದಿಮೂರು ವಾಕ್ಯಗಳಿಗೂ ಏಕಾವಯವತ್ವವನ್ನು ಹೇಳಬಹುದಾಗಿದೆ. ಅದೇ ರೀತಿಯಲ್ಲಿ **ನಮೋಋಷಿಭ್ಯಃ** ಎಂದಂತೆ ನಮಶ್ಶಬ್ದ ಮುಂದಾಗಿ ನಿರ್ದೇಶಿಸಿದುದು

"ಅಖಿಲಭುವನಜನ್ಮ" ಎನ್ನುವಂತೆಯೇ ಮಂಗಳೋಕ್ತವಾಗಿ ಅಕಾರೋಪ ಕ್ರಮವಾಗಿರುವುದು.

ಅದೇ ರೀತಿಯಲ್ಲಿ ಮೊದಲ ವಾಕ್ಯವನ್ನು ಅಕಾರೋಪಕ್ರಮ ಸಿಧ್ಯರ್ಥವಾಗಿ ಅಸ್ಮಚ್ಛಬ್ದವನ್ನು ಮುಂದಿಟ್ಟು ನಿರ್ದೇಶಿಸಿದಂತೆ ಉಳಿದ ಎರಡು ವಾಕ್ಯಗಳನ್ನೂ ಅಸ್ಮಚ್ಛಬ್ದವನ್ನೇ ಮುಂದಿಟ್ಟು ನಿರ್ದೇಶಿಸಿಯೂ "ಶನ್ನೋಮಿತ್ರಶ್ಶಂವರುಣಃ ಶನ್ನೋಭವತ್ವರ್ಯಮಾ" ಎಂದಂತೆ ತ್ರಯೋದಶ ವಾಕ್ಯಾತ್ಮಕವಾದ ಈ ಗುರುಪರಂಪರಾ ರೂಪ ಮಾಲಾ ಮಂತ್ರವು ಶ್ರೀಸಹಸ್ರನಾಮಾ ಮಾಲಾ ಮಂತ್ರದಂತೆ ಅನೇಕ ನಮ ಶ್ಶಬ್ದ ಶರೀರಕವಾಗಿ ದ್ವಾರಪಾಲಕರಿಗೂ, ಅದೇ ಪ್ರಧಾನರಾದ ನಿತ್ಯಸೂರಿಗಳಿಗೂ ಪ್ರತಿಪಾದಕವಾಗಿ ಪ್ರಥಮ ಮಧ್ಯಮ ಚರಮಾವಧಿ ರೂಪವಾದ ಪರ್ವತ್ರಯ ಪ್ರಕಾಶಕವಾಗಿ, ಉಪದೇಷ್ಟ್ರುಪದೇಶೋಪದೇಶ್ಯ ರೂಪವಾದ ಮೂರು ವರ್ಗಗಳಿಗೂ ಸಾಂಪ್ರದಾಯಿಕತ್ವ ಸಾದ್ಗುಣ್ಯ ಯೋಗ್ಯತೆಗಳಿಗೂ, ಸಂಪಾದಕವಾಗಿ "ವಕ್ತವ್ಯಂ ಗುರುಪರಂಪರೆಯುಂ ದ್ವಯುಮುಂ" ಎನ್ನುವುದರಿಂದ ದ್ವಯ ಮಂತ್ರೋಚ್ಚಾರಣೆಯಂತೆ ಸದಾನುಸಂಧೇಯವಾಗಿಯೂ, ಈ ವಾಕ್ಯ ಗುರುಪರಂಪರೆಯನ್ನು ಹೇಳಿದನಂತರವೇ ರಹಸ್ಯತ್ರಯವನ್ನು ಅನುಸಂಧಿಸಬೇಕು. ಆ ರೀತಿಯಲ್ಲಿ ಅನುಸಂಧಿಸದವರನ್ನು ನಾಲಿಗೆಯನ್ನು ಕೊಟ್ಟಿದ್ದರೂ ಅಜ್ಞಾನದಿಂದ ಅದರ ಕಾರ್ಯವನ್ನು ಮರೆತು ಭಗವಂತನನ್ನು ಅವನ ಅಡಿದಾವರೆಗಳಲ್ಲಿ ಆಶ್ರಯಿಸಿದವರನ್ನು ಮರೆತು ತೊಳಲುವವರನ್ನು ತಿದ್ದಿ ಸರಿಯಾಗಿ ಅನುಸಂಧಾನ ಮಾಡುವವರನ್ನಾಗಿ ಮಾಡುವ ಶಕ್ತಿಯುಳ್ಳದ್ದಾಗಿರುವುದು. ಅಸ್ಮತ್ ಎಂಬ ಅಕಾರಾದಿ ಪದ ಆರಂಭವಾಗಿ ಅದೇ ರೀತಿಯಲ್ಲಿ ಶ್ರೀಮಚ್ಛಬ್ದಗಳು ಅನೇಕ ಸ್ಥಳಗಳಲ್ಲಿ ಮಧ್ಯೆ ಮಧ್ಯೆ ಸೇರಿಸಲ್ಪಟ್ಟು ಬರುವುದರಿಂದಲೂ ಅಂತ್ಯದಲ್ಲಿ **ಶ್ರೀಧರಾಯ ನಮಃ** ಎಂದು ಮಂಗಳ ರೂಪವಾದ **ನಮ** ಶ್ಶಬ್ದದಿಂದ ಕೂಡಿದ ಭಗವದ್ವಾಚಕ ಶಬ್ದದಿಂದ ಕೂಡಿರುವುದರಿಂದ ಸರ್ವವೂ ಎಂದರೆ **ಈ ವಾಕ್ಯಗುರುಪರಂಪರೆ** ಯೆಲ್ಲವೂ ಮಂಗಳಾತ್ಮಕವಾಗಿಯೇ ಇರುವುದು,

———

ಶ್ರೀಃ

# ಶ್ರೀಮತೇರಾಮಾನುಜಾಯನಮಃ

# ಆಚಾರ್ಯ ನಿರ್ಣಯವು

—o—

ಶ್ರೀರಾಮಾನುಜಾಚಾರ್ಯರು ಕಾಂಚೀಮಂಡಲದಲ್ಲಿ ಅವತರಿಸಿ ವಿಶಿಷ್ಟಾದ್ವೈತ ಮತವನ್ನು ವೃದ್ಧಿಪಡಿಸಿದರೆಂಬುದು ಸರ್ವ ಪ್ರಸಿದ್ಧವು. ಆಗ ಅವರ ಚರಣಕಮಲವನ್ನು ಆಶ್ರಯಿಸಿದವರುಗಳ ಸಂಖ್ಯೆಯು ಅನಂತವಾಗಿದ್ದಿತು. ಆದರೂ ಅವರುಗಳಲ್ಲಿ ೭೪ ಜನ ಸಿಂಹಾಸನಾಧಿಪತಿಗಳೆಂದು ಏರ್ಪಟ್ಟರು. ಇವರುಗಳಲ್ಲಿ ಕೆಲವರು ಸನ್ಯಾಸಿಗಳಾಗಿಯೂ, ಇನ್ನು ಕೆಲವರು ಗೃಹಸ್ಥರುಗಳಾಗಿಯೂ ಇರುತ್ತಾರೆ.

ಇವರುಗಳೆಲ್ಲಾ ತಮ್ಮ ಆಚಾರ್ಯರಾದ ಶ್ರೀರಾಮಾನುಜಾಚಾರ್ಯರ ಆಜ್ಞೆಯಂತೆ ಮತಸಂಪ್ರದಾಯಗಳನ್ನು ಪ್ರಚಾರಮಾಡುತ್ತಾ ಬಂದರು.

ಇದಕ್ಕೆ ಸೇರಿದವರುಗಳಿಗೆಲ್ಲ ವಿಶಿಷ್ಟಾದ್ವೈತಿಗಳೆಂದೂ, ಶ್ರೀವೈಷ್ಣವರುಗಳೆಂದೂ, ಎರಡು ವಿಧವಾದ ಹೆಸರು ಪ್ರಸಿದ್ಧಿಯಾಗಿ ಬಂದಿತು.

## ವಿಶಿಷ್ಟಾದ್ವೈತಿಗಳು

ವೇದಾಂತಮಾರ್ಗದಲ್ಲಿ ಚಿದಚಿದ್ವಿಶಿಷ್ಟವಾದ ಬ್ರಹ್ಮವನ್ನು ಅಂಗೀಕರಿಸುವವರಾದ್ದರಿಂದ ಆ ದರುಶನಕ್ಕೆ ಸೇರಿದವರೆಂಬ ಅರ್ಥಕ್ಕೆ ಬೋಧಕವಾಗಿ ವಿಶಿಷ್ಟಾದ್ವೈತಿಗಳೆಂದು ಸಮುದಾಯದ ಹೆಸರು ಉಂಟಾಯಿತು.

## ಶ್ರೀವೈಷ್ಣವರು

ನಿತ್ಯನೈಮಿತ್ತಿಕಾದಿ ಸಮಯಾಚಾರಗಳಲ್ಲಿ ಪಾಂಚರಾತ್ರ, ಸ್ಮೃತಿ ಮೂಲವಾದ ನಿಬಂಧನೆಗಳಂತೆ ಬಾಹ್ಯ ಚಿಹ್ನೆಗಳನ್ನು ಧರಿಸಿ ಅಂತರ ನಿಶ್ಚಯಗಳನ್ನು ಅವಲಂಬಿಸಿ ಮನೋವಾಕ್ಕಾಯಗಳಿಂದ ವಿಷ್ಣುಪಾರಮ್ಯ ಪರರಾಗಿರುವುದರಿಂದ ಶ್ರೀವೈಷ್ಣವರುಗಳೆಂದು ಹೆಸರುಂಟಾಯಿತು.

## ಪರಂಪರಾಕ್ರಮವು

ಮೇಲೆ ತಿಳಿಸಿದ ೭೪ ಜನ ಸಿಂಹಾಸನಾಧಿಪತಿಗಳಿಂದ ಎರಡು ವಿಧವಾದ ಸಂತಾನವು ಬೆಳೆಯುತ ಬಂದಿತು.

**೧. ಜ್ಞಾನಸಂತಾನವು. ೨. ಶರೀರಸಂತಾನವು.**

**ಜ್ಞಾನಸಂತಾನವೆಂದರೆ—** ಶಿಷ್ಯಾಚಾರ್ಯ ಕ್ರಮದಿಂದ ಸರಹಸ್ಯ ವಾದ ಉಭಯವೇದಾಂತಾರ್ಥಗಳನ್ನು ಅವಿಚ್ಛಿನ್ನವಾಗಿ ನಡೆಸಿಕೊಂಡು ಬರುವ ಪರಂಪರೆಯು—

**ಶಾರೀರಸಂತಾನವೆಂದರೆ—** ಬ್ರಹ್ಮಚರ್ಯ ವ್ರತವನ್ನು ಕಳೆದು ಸ್ನಾತರಾಗಿ ಗೃಹಸ್ಥಾಶ್ರಮವನ್ನವಲಂಬಿಸಿ ದೇವತಾದಿ ಋಣತ್ರಯ ಗಳನ್ನು ಕಳೆಯುವುದರ ಮೂಲಕ ಧರ್ಮಪ್ರತಿಷ್ಠೆಗಾಗಿ ಪ್ರಜೆಗಳನ್ನು ಹೊಂದಿ ಬರುವ ವಂಶದ ಸಾಲು.

## ಮಠಾಧಿಪತಿಗಳು

೭೪ ಜನ ಸಿಂಹಾಸನಾಧಿಪತಿಗಳಲ್ಲಿ ಸಂಸಾರ ಸಂಬಂಧವಿಲ್ಲದೆ ನಿವೃತ್ತ ತರ್ಷರಾಗಿರುವ ಸನ್ಯಾಸಿಗಳಿಂದ ಶಿಷ್ಯಪ್ರಶಿಷ್ಯ ಕ್ರಮವಾಗಿ ಜ್ಞಾನಸಂತಾನ ಒಂದೇ ಬೆಳೆದು ಬರುವುದು.

ಈ ರೀತಿಯಲ್ಲಿ ಬಂದ ಶಿಷ್ಯಾಚಾರ್ಯಕ್ರಮದಲ್ಲಿ ತಮ್ಮ ತಮ್ಮ ಹಿಂದಿನವರಿಂದ ಸನ್ಯಾಸಾಶ್ರಮವನ್ನೂ, ಬ್ರಹ್ಮವಿದ್ಯೋಪದೇಶವನ್ನೂ ಹೊಂದಿ ನಿವೃತ್ತಸಂಸಾರಿಗಳಾಗಿ ಪರಮಹಂಸರಾಗಿಯೇ ಬಂದು ಪುಣ್ಯ

ಕ್ಷೇತ್ರಗಳಲ್ಲಿ ಜ್ಞಾನಾನುಷ್ಠಾನಗಳ ಪ್ರಚಾರಕ್ಕಾಗಿ ನೆಲೆ ನಿಂತವರುಗಳಿಗೆ ಮಠಾಧಿಪತಿಗಳೆಂದು ಪ್ರಸಿದ್ಧಿಯುಂಟಾಯಿತು.

## ಆಚಾರ್ಯಪುರುಷರು

ಗೃಹಸ್ಥ ಸಿಂಹಾಸನಾಧಿಪತಿಗಳಿಗೆ ಧರ್ಮಪ್ರಜಾ ಸಂಪತ್ತಿಗೆ ಸ್ವರೂಪ ಯೋಗ್ಯತೆಯು ನಿರಾಬಾಧವಾದುದರಿಂದ ಜ್ಞಾನಸಂತಾನದಂತೆ ಶಾರೀರ ಸಂತಾನವೂ ಬೆಳೆದು ಬರುವುದು. ಇವೆರಡೂ ಯಾವ ಗೃಹಸ್ಥರಿಗೆ ಸರಿಯಾಗಿರುತ್ತಿದೆಯೋ ಅವರಿಗೆ ಆಚಾರ್ಯ ಪುರುಷರೆಂದು ಪ್ರಸಿದ್ಧಿಯಿರುತ್ತೆ. ಶಿಷ್ಯರ ದೃಷ್ಟ್ಯಾ ನಿರೂಪಿಸುವಾಗ್ಯೆ ಆಚಾರ್ಯಪುರುಷರೆಂತಲೂ, ಅವರ ದೃಷ್ಟ್ಯಾ ಅವರನ್ನು ನಿರೂಪಿಸುವಾಗ್ಯೆ ಸ್ವಯಮಾಚಾರ್ಯಪುರುಷರೆಂತಲೂ ವ್ಯವಹಾರವುಂಟು.

## ಗೃಹಸ್ಥರೂ, ಸನ್ಯಾಸಿಗಳೂ, ಇವರುಗಳ ಅನ್ಯೋನ್ಯತೆಯು.

ವೇದಾಂತಾರ್ಥ ಜ್ಞಾನಾನುಷ್ಠಾನವೇ ಆತ್ಮೋಜ್ಜೀವನಕಾರಿಯೆಂದು ಸರ್ವಶಾಸ್ತ್ರ ಪ್ರಸಿದ್ಧವಾದ್ದರಿಂದ ಹಿಂದಿನ ಸಿಂಹಾಸನಾಧಿಪತಿಗಳು ಒಳರಲ್ಲಿ ತರತಮ ಭಾವಭೇದವು ಯಾವುದೂ ಇಲ್ಲದೆ ದರ್ಶನ ಪ್ರವರ್ತನದ ಆಚಾರ್ಯ ಭಾವವು ಏಕರೂಪವಾಗಿ ಉಂಟಾಯಿತು. ಈ ರೀತಿಯಲ್ಲಿ ಬೆಳಗಿದ ಜ್ಞಾನಸಂತಾನದಲ್ಲಿ ಗೃಹಸ್ಥರೂ, ಸನ್ಯಾಸಿಗಳೂ ಆಚಾರ್ಯಶಿಷ್ಯ ಭಾವವನ್ನು ಅವಲಂಬಿಸಿರುವುದರಿಂದ ಇದು ಮುತ್ತು ಹವಳವೂ ಸೇರಿದ ಮಾಲಿಕೆಯಂತೆ ಹೃದಯಂಗಮವಾಗಿ ಇರುವುದು.

(ಜ್ಞಾನವಿಚಾರದಲ್ಲಿ ವಿಶಿಷ್ಟಾದ್ವೈತಿಗಳು, ಗೃಹಸ್ಥರಿಗೆ ಸನ್ಯಾಸಿಗಳೂ ಶಿಷ್ಯತ್ವವನ್ನು ಅಂಗೀಕರಿಸಿರುವರು. ಶರೀರಾನುಬಂಧ ಧರ್ಮೋಪಾಧಿಕವಾದ ವರ್ಣಾಶ್ರಮ ಸಿದ್ಧ ತರತಮ ಭಾವದ ಪ್ರಾಧಾನ್ಯದಿಂದ ಇತರ ಸಮಯಾಚಾರಿಗಳು ಇದನ್ನು ಒಪ್ಪುವುದಿಲ್ಲ.)

ಹಿಂದೆ ತಿಳಿಸಿದಂತೆ ಶ್ರಿಯಃಪತಿಯಾದ ಸರ್ವೇಶ್ವರನೇ ಲೋಕೋಜ್ಜೀವನಾರ್ಥವಾಗಿ ಆಚಾರ್ಯ ರೂಪದಿಂದ ಅವತರಿಸಿ ಚೇತನರಾದ

ನಮ್ಮನ್ನು ಉಜ್ಜೀವಿಸುವಂತೆ ಮಾಡಿರುವನು. ತಾನೂ ಸಹ ಅವತ ರಿಸಿದಾಗಲೆಲ್ಲ ಆಚಾರ್ಯನನ್ನು (ಗುರು)ಅಂಗೀಕರಿಸಿ ಅವರಿಂದ ವಿದ್ಯಾ ಭ್ಯಾಸಾದಿಗಳನ್ನು ಹೊಂದಿದಂತೆ ಗ್ರಂಥಗಳಿಂದ ತಿಳಿದು ಬರುವುದು. ಆದರೆ ಆಚಾರ್ಯನು ಜ್ಞಾನಾನುಷ್ಠಾನ ಪೂರ್ಣನಾಗಿರಬೇಕೆಂದು ಗ್ರಂಥ ಗಳಿಂದ ತಿಳಿದು ಬರುತ್ತದೆ. ಅಂಥ ಆಚಾರ್ಯನು ದೀವಟಿಗೆ ಹಿಡಿದು ಹುಡುಕಿದರೂ ದೊರಕುವುದಿಲ್ಲ. ಅಂಥ ಆಚಾರ್ಯರುಗಳು ಪೂರ್ವಾ ಚಾರ್ಯರುಗಳೊಂದಿಗೇ ಮುಗಿದಂತೆ ಕಾಣಬರುವುದು. ಅವರು ತಮ್ಮ ಹತ್ತಿರ ಜ್ಞಾನವನ್ನು ಗ್ರಹಿಸಬೇಕೆಂಬ ಆಸಕ್ತಿ ಇಲ್ಲದೇ ಇರುವ ಶಿಷ್ಯನಿಗೆ ವಿಶೇಷಾರ್ಥಗಳನ್ನು ಉಪದೇಶ ಮಾಡುತ್ತಿರಲಿಲ್ಲ. ಅಲ್ಲದೆ ಈ ಶಿಷ್ಯರುಗಳ ಆದರಾದಿಗಳನ್ನು ಪರೀಕ್ಷಿಸಿಯೇ ಉಪದೇಶಿಸುತ್ತಿದ್ದರು. ಈಗಿನವರಂತೆ ೧—೦—೦ ರೂ ೨—೦—೦ ರೂಪಾಯಿ ಟಿಕೀಟು ಇಟ್ಟು ಅಧಿಕಾರಿ ಅನಧಿಕಾರಿಯೆಂಬ ವಿವಕ್ಷತೆಯಿಲ್ಲದೆ ಹೇಳಿದಂತೆ ಕಾಣಬರುವುದಿಲ್ಲ. ಇಂಥಹ ಪರಿಸ್ಥಿತಿಗಳಲ್ಲಿ ಪ್ರಾಚೀನಾಚಾರ್ಯರುಗಳು ಜ್ಞಾನವಂತರಲ್ಲ ವೆಂದೂ, ಸಂಕುಚಿತ ಹೃದಯರೆಂದೂ ಕೆಲವರು ಕುಲಕ್ರಮವಾಗಿ ಬಂದ ಆಚಾರ್ಯರನ್ನು ಪರಿತ್ಯಜಿಸುತ್ತಿರುವರು. ಪ್ರಕೃತದಲ್ಲಿ ಬಾಹ್ಯ ವೇಷ ಮತ್ತು ವಿದ್ಯೆಯನ್ನು ಮಾತ್ರವೇ ಪ್ರಧಾನವೆಂದೂ, ಬಹು ಶಿಷ್ಯತ್ವ ವೆಂದೂ ಆಲೋಚಿಸಿ ಆ ಆಚಾರ್ಯರುಗಳ ಆಂತರಂಗಿಕ ವೃತ್ತಿಯನ್ನು ಸ್ವಲ್ಪವೂ ಗಮನಿಸದೆ ಅವರನ್ನು ಅಶ್ರಯಿಸುತ್ತಿರುವರು. ಪೂರ್ವಾಚಾ ರ್ಯರುಗಳ ಆಂತರಂಗಿಕ ಅಭಿಪ್ರಾಯಗಳನ್ನು ತಿಳಿದುಕೊಳ್ಳದೆ ಅವರಲ್ಲಿ ವಿಪ್ರತಿಪತ್ತಿಯಿಂದ ನಡೆಯುವುದು ಬಹಳ ಅಯುಕ್ತವು.

ಪೂರ್ವಕರ್ಮ ಫಲದಿಂದ ವಿದ್ಯೆಯು ಲಭಿಸಬಹುದು, ಆದರೆ ಅಂಥಹವರಿಗೆ ಅನುಷ್ಠಾನವು ದುರ್ಲಭವು. ಇಂಥಹ ಬಾಹ್ಯ ವೇಷಗಳಲ್ಲಿ ನಿಪುಣರಾದವರನ್ನು ನೋಡಿದಾಗಲೆಲ್ಲ ಪೂರ್ವಾಚಾರ್ಯರನ್ನು ಬಿಡುವಂತೆ ಮಾಡುವುದು. ದೊಡ್ಡ ದೊಡ್ಡ ಉಪನ್ಯಾಸಾದಿಗಳನ್ನು ಮಾಡುವವರನ್ನು ನೋಡಿದ್ದೇ ಆದರೆ ಅವರು ವಿದ್ವತ್‌ಕೀರ್ತಿ ಶ್ರೇಷ್ಠರಾಗಿಯೂ, ಜನಾ ದರಣೀಯರಾಗಿಯೂ, ಹರಿಣೀಖುರ ಮಾತ್ರಾವಯವದಲ್ಲಿ ಆಸಕ್ತಿಯುಳ್ಳ

ವರಾಗಿರುವರೇ ವಿನಹ ಭಗವಂತನ ಅನನ್ಯ ಭೋಗ್ಯತಾಕಾರರಾಗಿರುವುದು ಎಲ್ಲಿಯೂ ಕಾಣಬರುವುದಿಲ್ಲ. ಯಾರನ್ನು ನೋಡಿದರೂ, ಸ್ವೋದರ ಪೂರಣ, ಪತ್ನೀ ಪುತ್ರ ಭೂಷಣಾಲಂಕಾರ ತತ್ಪರರಾಗಿ ವೇದಾಂತ ವೇಷಧಾರಿಗಳಾಗಿಯೇ ಕಾಣಿಸುವರು. ಆದರೆ ದೋಷಾರೋಪಣೆಯನ್ನು ಹೇಳಲು ಹೊರಟರೆ ಎಲ್ಲರಲ್ಲೂ ಯಾವುದಾದರೊಂದು ದೋಷವು ಕಂಡೇ ಕಾಣುವುದು. ಆದರೆ ಕುಲಕ್ರಮಾಗತಾಚಾರ್ಯರಾಗಿ ಬಂದ ಆಚಾರ್ಯರನ್ನು ಬಿಡುವುದು ಮಹಾಪಾತಕಾದಿ ದೋಷದಿಂದ ಕೂಡಿದವರಾಗಿದ್ದಲ್ಲಿ ವಿನಹ ಅವರನ್ನು ಬಿಟ್ಟುಬಿಡುವುದು ಮಹಾಪಾತಕವೆಂದೂ ನರಕಾವಹವೆಂದೂ ಪೂರ್ವಾಚಾರ್ಯರುಗಳು ಘೋಷಿಸಿರುವರು,

ಶ್ರೀವಚನಭೂಷಣೆ ಮೂ—೧೯೮

ತ್ರಿಶಂಕನ್ಪೈ ಪ್ಪೋಲೆ ಕರ್ಮ ಚಂಡಾಲನಾಯ್
ಮಾರ್ವಿಲಿಟ್ಟ ಯಜ್ಞೋಪವೀತಂ ತಾನೇವಾರಾಯ್ ವಿಡುಮಂ

ಈ ವಾಕ್ಯಕ್ಕೆ ಪೂರ್ವಾಚಾರ್ಯರುಗಳು ಬರೆದಿರುವ ವ್ಯಾಖ್ಯಾನವನ್ನು ಓದಿದರೆ ಕುಲಕ್ರಮಾಗತಾಚಾರ್ಯರನ್ನು ಬಿಟ್ಟು ಇತರ ಆಚಾರ್ಯರನ್ನು ಆಶ್ರಯಿಸುವುದರಿಂದ ತ್ರಿಶಂಕುವಿನಂತೆ ಇಹಪರ ಭ್ರಷ್ಟರಾಗಿ ಚಂಡಾಲತ್ವವನ್ನು ಹೊಂದುವರೆಂದು ವಿವರಿಸಿರುವರು.

## ಕುಲಕ್ರಮಾಗತಾಚಾರ್ಯರು

ಆಚಾರ್ಯರು ಯಾರು? ಹೇಗೆ? ಸಂಬಂಧ, ವಿಸರ್ಜನೆ ಇವುಗಳನ್ನು ಸಾಧ್ಯವಾದ ಮಟ್ಟಿಗೆ ವಿವರಿಸಿರುವುದು.

ಶ್ರೀಪಾಂಚರಾತ್ರೇ ಪರಮಪುರುಷ ಸಂಹಿತಾಯಾಂ:—

ಆಚಾರ್ಯೋ ದ್ವಿವಿಧಃ ಪ್ರೋಕ್ತಸ್ಸರ್ವಶಾಸ್ತ್ರಾರ್ಥವೇದಿಭಿಃ
ಕುಲಕ್ರಮಾಗತಃ ಪೂರ್ವಃ ಪ್ರತ್ಯಗ್ರಾಖ್ಯ ಸ್ತಥಾಪರಃ ||

ಈ ಆಚಾರ್ಯರುಗಳಲ್ಲಿ ಕುಲಕ್ರಮಾಗತಾಚಾರ್ಯರೆಂದೂ, ಪ್ರತ್ಯಗ್ರಾಚಾರ್ಯರೆಂದೂ ಎರಡು ವಿಧವು,

"ಧರ್ಮದ್ವಾರಾ ಕರ್ಮ ಯಸ್ಮಿನ್ ಜಾತಿಸ್ತತ್ಕುಲಮುಚ್ಯತೇ
ತತ್ಪ್ರವಾಹ ಮುಖ್ಯಸ್ಯಾಪಿ ಪದವಿಕ್ಷೇಪಣಂ ಕ್ರಮಃ"||

ಕುಲವೆಂದರೆ— "ಅವಿಪ್ಲವಾಯ ಧರ್ಮಾಣಾಂ" ಎಂದರೆ ವರ್ಣಾಶ್ರಮ ಧರ್ಮಗಳಿಗೆ ಹಾನಿಬರದಂತೆ ಭಗವನ್ಮುಖೋಲ್ಲಾಸಕರವಾದ ಕರ್ಮವು ಯಾವಜಾತಿಯಲ್ಲಿರುವುದೋ ಅದಕ್ಕೆ ಕುಲವೆಂದೂ,ಪೂರ್ವೋಕ್ತ ಧರ್ಮವನ್ನು ಪೂರ್ವೋಕ್ತ ಪರಂಪರೆಯಾಗಿ ಅವಿಚ್ಛಿನ್ನವಾಗಿ ಶಿಷ್ಯಾಚಾರ್ಯ ಕ್ರಮವಾಗಿ ಬರುವುದಕ್ಕೆ ಕುಲವೆಂದೂ ಹೆಸರು.

"ಆಗತಸ್ತತ್ತ್ವ ಬೋಧಾಯ ವಿಭುರಾಚಾರ್ಯ ಮೂರ್ತಿಮಾನ್"
"ಕುಲಕ್ರಮಾಗತಾಚಾರ್ಯಂ ತಮಾಚಾರ್ಯವಿದೋ ವಿದುಃ"

ಮೇಲೆ ಹೇಳಿದ ಧರ್ಮಾನುಷ್ಠಾನದವರು ಸಂಸಾರಿಗಳಿಗೆ ತತ್ವ ಬೋಧಾರ್ಥವಾಗಿ ಆಚಾರ್ಯ ರೂಪಿಯಾಗಿ ಭಗವದಂಶದಿಂದ ಅವತರಿಸಿ ಬಂದ ಪ್ರಕಾರವೇ ಆಗತ ಶಬ್ದಾರ್ಥವು.

ಈರೀತಿ ಪರಂಪರೆಯಾಗಿ ವೇದಾಂತ ರಹಸ್ಯತ್ರಯ ಮಂತ್ರೋಪದೇಶವನ್ನು ಮಾಡುವವರಿಗೆ ಕುಲಕ್ರಮಾಗತಾಚಾರ್ಯರೆಂದು ಹೆಸರು.

## ಪ್ರತ್ಯಗ್ರಾಚಾರ್ಯರು

"ಪುಂಸಃ ಪರಗತಿಜ್ಞಾನೇ ಜಿಜ್ಞಾಸಾ ಜಾಯತೇ ಯದಾ
ತತ್ಪೂರ್ವದೇಶಿಕಾಭಾವಾತ್ ಯಸ್ಸಮಿತ್ಪಾಣಿರಾಶ್ರಯೇತ್||
ತದಾನೀಮಸ್ಯ ದಯಯಾ ದೀಕ್ಷಾಸಂಸ್ಕಾರಪೂರ್ವಕಂ
ಮಂತ್ರ ವ್ಯಾಖ್ಯಾಕೃದಾಚಾರ್ಯಃ ಪ್ರತ್ಯಗ್ರಾಖ್ಯಸ್ಸ ಉಚ್ಯತೇ"||

ಇದುವರೆಗೂ ತನ್ನ ಕುಲದಲ್ಲಿ ಆಚಾರ್ಯ(ಕುಲಗುರು) ಇಲ್ಲದೆ ಅವೈಷ್ಣವ ವಂಶದವನಾಗಿದ್ದು ಈಗ ಅರ್ಥಪಂಚಕಜ್ಞಾನದ್ವಾರಾ ಉಜ್ಜೀವಿಸಬೇಕೆಂಬುದಾಗಿ (ಮುಕ್ತಿಮಾರ್ಗವನ್ನು ಹೊಂದುವುದು) ನಿಶ್ಚಯಿಸಿ ಜಾಯಮಾನಭಗವತ್ಕಟಾಕ್ಷಪಾತ್ರನಾಗಿ, ಹೊಸದಾಗಿ ಸಮಿತ್ಪಾಣಿಯಾಗಿ ಸದಾಚಾರ್ಯರನ್ನು ಆಶ್ರಯಿಸಿ ಪಂಚಸಂಸ್ಕಾರ ಮಂತ್ರೋಪದೇಶದಿಂದ

ಶ್ರೀವೈಷ್ಣವತ್ವವನ್ನು ಹೊಂದಲು ಕಾರಣರಾದ ಆಚಾರ್ಯರಿಗೆ ಪ್ರತ್ಯಗ್ರಾಚಾರ್ಯರೆಂದು ಹೆಸರು. (ಶಿಷ್ಯನದೃಷ್ಟ್ಯಾ) ಎಂದರೆ ಇದುವರೆಗೂ ಆ ಕುಲದಲ್ಲಿ ಕುಲಗುರುವೆಂದು ಇಲ್ಲದೆ ಹೊಸದಾಗಿ ಮನೆಗುರುಗಳನ್ನಾಗಿ ಮಾಡಿಕೊಳ್ಳುವುದು. ಅಂಥಹ ಗುರುಗಳಿಗೆ ಪ್ರತ್ಯಗ್ರಾಚಾರ್ಯರೆಂದು ಹೆಸರು. ಆದರೆ ಮೇಲ್ಕಂಡ ಇಬ್ಬರು ಗುರುಗಳಲ್ಲೂ ಕುಲಕ್ರಮಾಗತಾಚಾರ್ಯರೇ ಮುಖ್ಯರಾದವರು. ಮತ್ತು ಶ್ರೇಷ್ಠರು.

"ಕುಲಾಚಾರ್ಯಸ್ಯ ಭಜನಂ ಯೇ ವಾ ಸುಕೃತಿನೋ ಜನಾಃ
ಕುರ್ವನ್ತಿ ಸತತಂ ಭಕ್ತ್ಯಾ ತೇ ವಂದ್ಯಾಸ್ಸರ್ವದೇವತೈಃ||
ಸರ್ವಕ್ರತುಶತಂ ಕೃತ್ವಾ ಯತ್ಫಲಂ ಸಮವಾಪ್ನುಯಾತ್
ತತ್ಫಲಂ ಸಮವಾಪ್ನೋತಿ ಕುಲಾಚಾರ್ಯಸ್ಯ ಪೂಜನಾತ್||
ಯತ್ಕೃತಾ ಷೋಡಶಮಹಾದಾನಾನಿ ಲಭತೇ ಫಲಂ
ತತ್ಫಲಂ ಸಮವಾಪ್ನೋತಿ ಕುಲಾಚಾರ್ಯಸ್ಯ ಪೂಜನಾತ್||
ಸಾರ್ಧತ್ರಿಕೋಟಿ ತೀರ್ಥೇಷು ಸ್ನಾತ್ವಾ ಯತ್ಫಲಮಾಪ್ನುಯಾತ್
ತತ್ಫಲಂ ಸಮವಾಪ್ನೋತಿ ಕುಲಾಚಾರ್ಯಸ್ಯ ಪೂಜನಾತ್||
ಸಂತುಷ್ಟೋ ತು ಕುಲಾಚಾರ್ಯೋ ಶ್ರದ್ಧಯಾ ಯಸ್ಯ ಭಕ್ತಿತಃ
ತೇನ ತುಷ್ಟಂ ಜಗತ್ಸರ್ವಂ ತುಷ್ಟಾಸ್ಸ್ಯುಸ್ಸರ್ವದೇವತಾಃ"||

ಪುಣ್ಯವಂತರಾದ ಯಾವ ಜನರು ಕುಲಾಚಾರ್ಯರನ್ನು ಪೂಜಿಸಿ ಧ್ಯಾನಿಸುತ್ತಾರೋ ಅವರು ಸರ್ವದೇವತೆಗಳಿಂದಲೂ ಪೂಜಿಸಲ್ಪಡುವರು. ಒಂದುನೂರು ಯಜ್ಞವನ್ನು ಮಾಡಿದರೆ ಯಾವ ಫಲವನ್ನು ಹೊಂದುವರೋ, ಷೋಡಶಮಹಾದಾನದಿಂದ ಯಾವ ಫಲವನ್ನು ಹೊಂದುವರೋ ಮೂರೂವರೆಕೋಟಿ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದವರು ಯಾವ ಫಲವನ್ನು ಹೊಂದುವರೋ ಆ ಫಲಗಳೆಲ್ಲವನ್ನೂ ಕುಲಾಚಾರ್ಯರನ್ನು ಪೂಜಿಸುವುದರಿಂದ ಹೊಂದುವರು. ಅಲ್ಲದೆ ಅವರವರು ಮಾಡಿದ ಶ್ರದ್ಧಾಭಕ್ತಿಗಳಿಂದ ಯಾವಾಗ ಕುಲಾಚಾರ್ಯರು ಸಂತೋಷಪಡುವರೋ ಆಗ ಸರ್ವಜಗತ್ತೂ ಸರ್ವದೇವತೆಗಳೂ ಸಂತೋಷವನ್ನು ಹೊಂದುವರು.

"ಉದ್ಧರ್ತುಂ ನಿಜವಂಶೋತ್ಥಾ ದೇಶಿಕಂ ಯದಿ ವಾಂಛತಿ
ತಮೇವಾನ್ವೇಷಯೇ ತಸ್ಮಾತ್ ಸರ್ವಜ್ಞಂ ದೇಶಿಕಂ ತತಃ||
ದೈವಾದ್ದೇಶಾಂತರಗತೇ ಲುಪ್ತೇ ವಾ ಕುಲದೇಶಿಕೇ
ತದೀಯ ಪುತ್ರಭ್ರಾತ್ರಾದೇರುಪದೇಶೋಪಿ ಗೃಹ್ಯತಾಂ"||

ಶಿಷ್ಯನು ಅಜ್ಞಾನ ದೆಶೆಯಲ್ಲಿರುವಾಗ ಪಂಚಸಂಸ್ಕಾರಾದಿಗಳನ್ನು ಮಾಡಿದ ಗುರುವು ಶಿಷ್ಯನಿಗೆ ತಿಳಿಯದ ದೇಶಕ್ಕೆ ಹೊರಟುಹೋದರೂ ಅಥವಾ ಪರಮಪದಿಸಿದರೂ, ತನ್ನ ಆಚಾರ್ಯನ ಪುತ್ರ, ಭ್ರಾತ್ರಾದಿಗಳ ಸನ್ನಿಧಿಯಲ್ಲಿ ಆಶ್ರಯಿಸಿ ಗ್ರಂಥಾದಿಗಳನ್ನು ಓದಬಹುದು. "ಭ್ರಾತ್ರಾದೇಃ" ಎಂದು ಆದಿ ಶಬ್ದವಿರುವುದರಿಂದ ಗುರುಗಳ ಜ್ಞಾತಿಗಳು ತತ್ಸಂಬಧಿಗಳಲ್ಲೂ ಓದಬಹುದು. ಇದರಿಂದ ಕುಲಾಚಾರ್ಯರಲ್ಲದ ಇತರರಲ್ಲಿ ಅಶ್ರಯಿಸ ಕೂಡದೆಂಬು ಸ್ಪಷ್ಟವಾಗಿ ತಿಳಿಸುವುದು. ಒಂದುವೇಳೆ ಆರೀತಿ ಯಾರೂ ದೊರಕದಿಷ್ವಲ್ಲಿ ಇತರತ್ರ ಆಶ್ರಯಿಸಬಹುದೆಂದೂ ತಿಳಿಯಬರುವುದು.

"ತತ್ಪುತ್ರಾದೇರಭಾವೇ ತು ಶಿಷ್ಯಶ್ಚೇತ್ ತ್ತತ್ತ್ವಲೋಲುಪಃ
ತತ್ತುಲ್ಯಭಾವಂ ಸರ್ವಜ್ಞಮಾಚಾರ್ಯಾನ್ತರಮಾಶ್ರಯೇತ್||
ತೇನೋಪದಿಷ್ಟಸ್ಸರ್ವಜ್ಞಶ್ಶಿಷ್ಯಸ್ಸದ್ಗತಿಮಾಪ್ನುಯಾತ್
ತಮೇವ ಗುರುಮನ್ಯಾಪಿ ಪುತ್ರಾದ್ಯಾ ಪೂಜಯನ್ತ್ಯತಃ"||
"ದೈವಾಧೀನಾತ್ಕುಲಾಚಾರ್ಯೇ ತತ್ಪುತ್ರಾದೌ ತಥಾಗತೇ
ಉಪದೇಶೋ ಗೃಹೀತವ್ಯಃ ಪುನಃ ಕುಲಗುರೋರ್ಮನೋಃ"||

ಕುಲಾಚಾರ್ಯರ ಪುತ್ರಾದಿಗಳಾರೂ ಇಲ್ಲದಿದ್ದಲ್ಲಿ ತಾನೂ ತನ್ನ ಮಕ್ಕಳೂ ಇತರತ್ರ ಆಶ್ರಯಿಸಬಹುದು. ದೈವಾಧೀನದಿಂದ ಪುನಃ ಪೂರ್ವಾಚಾರ್ಯರೇ ಆಗಲಿ ಅವರ ಮಕ್ಕಳೇ ಆಗಲಿ ಅವರ ಸಂಬಂಧಿಗಳು ಪುನಃ ದೊರಕಿದಲ್ಲಿ ಹೊಸದಾಗಿ ಆಶ್ರಯಿಸಿದ ಸ್ಥಳವನ್ನು ಬಿಟ್ಟು ಪುನಃ ಪೂರ್ವಾಚಾರ್ಯರಲ್ಲಿ ಹೋಗಿ ಸೇರಬಹುದು.

"ಪುನಃಸ್ಸಂಸ್ಕಾರಸಂಶುದ್ಧಾಃ ಸ್ವರ್ಣವತ್‌ಗತಕಲ್ಮಷಾಃ
ವಂಶಪೂತಾ ವಿವರ್ಧಂತೇ ರಾಜಂತೇ ಶಿಷ್ಯಕೋಟಯಃ"
ಎಂದು ಪ್ರಮಾಣವಿರುವುದು.

"ಕುಲಕ್ರಮಾಗತಾಚಾರ್ಯಸನ್ನಿಧಾವನ್ಯದೇಶಿಕಃ
ಅನುಮತ್ಯಾ ವಿನಾ ತಸ್ಯ ಸಂಪೂಜ್ಯೋ ನಕದಾಚನ||
ಕುಲಾಚಾರ್ಯನಿದೇಶೇನ ತತ್ರ ವೈ ದೇಶಿಕಾಂತರಂ
ತತ್ತುಲ್ಯ ಭಕ್ತಿರ್ಭಜನೇ ಸರ್ವೈ ನರಕಭಾಜನಂ"||
"ಸರ್ವದೇಶೇಷು ದೃಷ್ಟೇಷು ತ್ರಾತಾಸೌ ಕುಲದೇಶಿಕ:
ರುಷ್ಟೇ ಕುಲಗುರೌ ಬಹ್ಮ(ನ್)! ತ್ರಾತಾವೈ ವಾಸ್ಯಕಶ್ಚನ
ಅನ್ಯತ್ರಶ್ರೃಣುಯಾದ್ದೇಯಂ ಅನುಜ್ಞಾಪ್ಯೈವ ಜೀವತಿ"||

ಪ್ರಕೃತ ಆಚಾರ್ಯರಾದವರು ಎಷ್ಟರ ಮಟ್ಟಿಗೆ ಅನುಷ್ಠಾನ ಪರರಾಗಿರಬೇಕು ಎಂದರೆ ಶಾಸ್ತ್ರವಿರುದ್ಧಾನುಷ್ಠಾನವಿಲ್ಲದಿದ್ದರೆ ಸಾಕು. ಶಾಸ್ತ್ರಜ್ಞಾನವು ವಿಶೇಷವಾಗಿಲ್ಲದಿದ್ದರೂ ದೋಷವುಂಟಾಗುವುದಿಲ್ಲ. ಜ್ಞಾನವು ಅಧಿಕವಾಗಿದ್ದು ರಾವಣಾದಿಗಳಂತಿದ್ದರೆ ಪ್ರಯೋಜನವಿಲ್ಲವು. "ಪರೋಪದೇಶೇಪಾಂಡಿತ್ಯಂ" ಎಂದಂತೆ ನಿಷ್ಪ್ರಯೋಜನವಾಗುವುದು. ಆಚಾರ್ಯನಿಗೆ ವಿಶೇಷಜ್ಞಾನವಿಲ್ಲದಿದ್ದರೂ ಅವರ ಆಜ್ಞೆಯನ್ನು ಹೊಂದಿ ಇತರರಿಂದ ಅರ್ಥವಿಶೇಷಗಳನ್ನು ಗ್ರಹಣ ಮಾಡಬಹುದು. ಆಜ್ಞೆಯಿಲ್ಲದೆ ಇತರರನ್ನಾಶ್ರಯಿಸುವುದು ನರಕಕ್ಕೆ ಕಾರಣವು. ಸರ್ವವಿಷಯಗಳಲ್ಲಿಯೂ ಕುಲಗುರುವೇ ರಕ್ಷಕರಾಗಿರುವರು.

"ಬಹು ನಾತ್ರಕಿಮುಕ್ತೇನ ? ಬ್ರಹ್ಮನ್! ಸಂಕ್ಷೇಪತಃಶ್ರೃಣು
ನವೇದೈ ರ್ನಾಗಮೈ ಶ್ಯಾಸ್ತ್ರೈರ್ನಪುರಾಣೈಸ್ಸುವಿಸ್ತರೈಃ||
ನಯಜ್ಞೈ ರ್ನತಪೋಭಿರ್ವಾನತೀರ್ಥೈವ್ರತಕೋಟಿಭಿಃ
ನಾನ್ಯೈರುಪಾಯೈ ವಿವಿಧೈಃ ಮಂತ್ರೌಷಧಪುರಸ್ಸರೈಃ||
ಕುಲಕ್ರಮಾಗತಾಚಾರ್ಯ ತಿರಸ್ಕಾರಜಪಾತಪಾತ್
ಮುಚ್ಯತೇಮನುಜೋಮೂಢ ಸ್ಸರ್ವದುರ್ಗತಿಭಾಜನಂ"||

ವೇದ, ಪಾಂಚರಾತ್ರ, ಕರ್ಮಬ್ರಹ್ಮಮೀಮಾಂಸಾ ಸ್ಮೃತೀತಿಹಾಸ ಪುರಾಣಾದಿಗಳನ್ನು ಓದಿದರೂ, ಕೇಳಿದರೂ, ಅಶ್ವಮೇಧಾದಿ ಮಹಾಯಜ್ಞಗಳನ್ನು ಮಾಡಿದರೂ, ಜ್ಞಾನಯೋಗ ಭಕ್ತಿಯೋಗವೇ ಮೊದಲಾದ ತಪಸ್ಸುಗಳಿಂದಲೂ ಗಂಗಾದಿ ಪುಣ್ಯ ನದೀಸ್ನಾನಗಳಿಂದ

ಎಷ್ಟು ಪುಣ್ಯ ಕಾರ್ಯವನ್ನು ಮಾಡಿದರೂ ಮಣಿ ಮಂತ್ರೌಷಧ ಪುರಸ್ಸರವಾಗಿ ಎಷ್ಟು ಉಪಾಯವನ್ನು ಮಾಡಿದರೂ ಕುಲಕ್ರಮಾಗತಾಚಾರ್ಯರನ್ನು ತಿರಸ್ಕಾರ ಮಾಡಿದುದರಿಂದ ಬಂದ ಪಾಪವು ಹೋಗುವುದಿಲ್ಲ.

"ತಸ್ಮಾತ್ ಸರ್ವಾತ್ಮನಾ ಬ್ರಹ್ಮನ್! ಕುಲಾಚಾರ್ಯಂ ಪ್ರಪೂಜಯೇತ್
ಕರ್ಮಣಾ ಮನಸಾ ವಾಚಾ ನಿರ್ದೋಷೇ ಶುದ್ಧಿಮಾಪ್ನುಯಾತ್
ಗುರುದಾರಸುತಾದೌ ತು ಗುರುವ ದ್ವೃತ್ತಿಮಾಚರೇತ್"॥

ಸರ್ವಪ್ರಕಾರದಿಂದಲೂ ಕುಲಾಚಾರ್ಯರನ್ನು ಪೂಜಿಸಬೇಕು. ಹಾಗೆಮಾಡುವುದರಿಂದ ಮನೋವಾಕ್ಕಾಯ ಕರ್ಮದಿಂದ ಶುದ್ಧಿಯನ್ನು ಹೊಂದಿ ಇಹಪರದಲ್ಲಿ ಸುಖವನ್ನೂ ಸಂತೋಷವನ್ನೂ ಹೊಂದುವರು.

ಗುರುಪತ್ನೀಸುತರನ್ನು ಗುರುವಿನಂತೆಯೇ ಪೂಜಿಸಬೇಕು. ಆಚಾರ್ಯನಾದವನಿಗೆ ತನ್ನ ಕುಮಾರನನ್ನಾಶ್ರಯಿಸದೆ, ಇತರರನ್ನಾಶ್ರಯಿಸಿದರೆ ಅಂಥಹವನಲ್ಲಿ ಹೇಗೆ ಅನುಗ್ರಹ ಬರುವುದು? ಅಂಥಹವನು ಆಚಾರ್ಯನ ಅನುಗ್ರಹಕ್ಕೆ ಯಾವ ಕಾರಣದಿಂದಲೂ ಪಾತ್ರನಾಗುವುದಿಲ್ಲ.

ಒಂದುವೇಳೆ ಆಚಾರ್ಯನೇ ಆಗಲಿ ಅವರ ಉತ್ತರಾಧಿಕಾರಿ ಅಥವಾ ಮಕ್ಕಳೇ ಆಗಲಿ ನಿಂದಿತ ಕರ್ಮಾಚರಣೆಯುಳ್ಳವರಾಗಿದ್ದಲ್ಲಿ—

"ಜ್ಞಾನಹೀನಂ ಗುರುಂ ಪ್ರಾಪ್ಯ ಕುತೋ ಮೋಕ್ಷಮವಾಪ್ನುಯಾತ್
ಭಿನ್ನಾಂ ನಾವಂ ಸಮಾಶ್ರಿತ್ಯ ಸ್ತಬ್ಧಃ ಪಾರಂ ನ ಗಚ್ಛತಿ"॥

ಧ.ಸೂ."ನ ಪತಿತಮಾಚಾರ್ಯಂ ಜ್ಞಾತಿಂ ವಾ ದರ್ಶನಾರ್ಥೋಗಚ್ಛೇತ್
"ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ
ಉತ್ಪಥಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ"॥

ಇತ್ಯಾದಿ ವಚನಗಳು ಆಚಾರ್ಯನನ್ನು ಪರಿತ್ಯಜಿಸುವಂತೆ ಕಂಡು ಬಂದರೂ, ಇದು ಮಹಾಪಾತಕಾದಿ ದೋಷಗಳನ್ನೊಳಗೊಂಡಿದ್ದಲ್ಲಿ ವಿನಹ ಆಚಾರ್ಯನನ್ನು ಬಿಡಕೂಡದು. ಒಂದುವೇಳೆ ಹಾಗಿದ್ದಲ್ಲಿ ಅವರ ಪುತ್ರ ಭ್ರಾತ್ರಾದಿ ಜ್ಞಾತಿಗಳೇ ಮೊದಲಾದವರಲ್ಲಿ ಆಶ್ರಯಿಸಬಹುದು.

ಶ್ರೀವಚನಭೂಷಣೇ ೩—೩೦೭.

"ಆಚಾರ್ಯಾಪಚಾರ ತದ್ಭಕ್ತಾಪಚಾರಂಗಳಾಲ್ ವನ್ದ ಚಂಡಾಲತ್ವತ್ತೈ ಅಂದ ಆಚಾರ್ಯ ಭಕ್ತರೀಕಳುಡೈಯ ಶಾಪತ್ತಾಲೆ ಸರ್ವಲೋಕಲೋಚನ ಗೋಚರವಾಹ ಪೆತ್ತ ತ್ರಿಶಂಕುವೈಪ್ಪೋಲೆ ಯೆನ್ನಪಡಿ"—

"ಆಚಾರ್ಯಾಪಚಾರಮುಂ ತದ್ಭಕ್ತಾಪಚಾರಮುಂ ಇವೈಯೊನ್ರೊಕ್ಕೊನ್ರು ಕ್ರೂರಂಗಳುಮಾಯ್"

"ಗುರುಂ ಹುಂಕೃತ್ಯ ತುಂಕೃತ್ಯ ರೌರವಂ ನರಕಂ ವ್ರಜೇತ್"

ಎಂಬುದಾಗಿ ಆಚಾರ್ಯನನ್ನು ಹೂಂಕಾರದಿಂದಲೂ ಧಿಕ್ಕಾರ ದಿಂದಲೂ ಕಂಡರೆ ರೌರವನರಕ ಭಾಗಿಯಾಗುವನು. ಆದುದರಿಂದ ಯಾವ ಕಾರಣದಿಂದಲೂ ಆಚಾರ್ಯನನ್ನು ತಿರಸ್ಕರಿಸಕೂಡದು. ಪ್ರಕೃತ ಶಿಷ್ಯರಿಗೆ ಆಚಾರ್ಯನಾದವನು ತಮ್ಮ ಇಷ್ಟದಂತೆ ನಡೆಯುವಂತಿದ್ದರೆ ಆ ಆಚಾರ್ಯರು ಸಾತ್ವಿಕರೆಂದೂ, ಇಲ್ಲವಾದರೆ ಅಯೋಗ್ಯರೆಂದೂ ತಿಳಿದು, ತಾವು ಮಾಡುವ ಅಕೃತ್ಯಗಳಿಗೆ ಸಹಾಯಕರಾಗುವ ಆಚಾರ್ಯರನ್ನೇ ಏರ್ಪಡಿಸಿಕೊಳ್ಳುವರು. ಈ ಕಾಲದಲ್ಲಿ ಆಸ್ತಿಕತೆಯು ಅಭಿನಯವು ವಾಸ್ತವಿಕವಾದ ನಾಸ್ತಿಕ್ಯತೆಯೇ ಆಗಿರುತ್ತವೆ. ಅಲ್ಲದೆ ಆಚಾರ್ಯನ ದೋಷವನ್ನೇ ಎಣಿಸುವವನು ಎಷ್ಟು ಜ್ಞಾನವಂತನೋ ? ಎನ್ನುವುದು ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಶಿಷ್ಯನು ತಾನು ಜ್ಞಾನವಂತನು ಎಂದುಕೊಂಡಲ್ಲವೇ ಗುರುವನ್ನು ನಿಂದೆಮಾಡುವುದಾಗಲಿ ತ್ಯಜಿಸುವುದಾಗಲಿ ನಡೆಯುವುದು. ಇದು ಜ್ಞಾನಕಾರ್ಯವೇ ? ಆಲೋಚಿಸಿ ನಡೆಯಬೇಕು.

ಆನೆ, ಕುದುರೆ, ಪಲ್ಲಕ್ಕಿಯೇ ಮುಂತಾದುವುಗಳು ಮೋಕ್ಷಸಾಧನಗಳಲ್ಲ. ಅವುಗಳು ಕೇವಲ ಆಡಂಬರಗಳು. ಲೋಕವನ್ನು ವಶೀಕರಣ ಮಾಡುವ ಭ್ರಾಮಕ ವಸ್ತುಗಳು. ಶಿಷ್ಯರುಗಳಿಗೆ ವಿದ್ಯೆಗಿಂತ ಅನುಷ್ಠಾನವೇ ಉಜ್ಜೀವನಕ್ಕೆ ಕಾರಣವು. ಲೋಕಭ್ರಾಮಕವಾದ ವೇಷಗಳು ಯಾವಾಗಲೂ ರಕ್ಷಕವಾಗುವುದಿಲ್ಲ. ಆದ್ದರಿಂದ ಯಾವಕಾರಣದಿಂದಲೂ ಹೊರಗಿನ

ವೇಷ ಭೂಷಣಗಳಿಂದ ಭ್ರಮಿಸದೆ ಪೂರ್ವಾಚಾರ್ಯರ ಉತ್ತರಾಧಿಕಾ ಯನ್ನೇ ಆಶ್ರಯಿಸುವುದು ಭಗವನ್ಮುಖೋಲ್ಲಾಸಕರವಾಗುವುದು. ಗೃಹಸ್ಥ ಆಚಾರ್ಯಪುರುಷರೆಲ್ಲರೂ, ತಮ್ಮನ್ನೇ ಆಶ್ರಯಿಸದಲ್ಲಿ ಮೋಕ್ಷವು ದೊರಕುವುದೆಂದು ಹೇಳುವರು. "ಸ್ವಯಂತರಿತುಮಕ್ಷಮಃ ಕಿಮುಪರಾನಸೌ ತಾರಯೇತ್" ಎನ್ನುವಂತೆ ತನಗೆ ದಿಕ್ಕಿಲ್ಲದಿರುವಾಗ ಇತರರಿಗೆ ಇವರು ಹೇಗೆ ರಕ್ಷಕರಾಗುವರು ? ಒಂದುವೇಳೆ ತಾವು ಜ್ಞಾನಾಧಿಕರಾಗಿದ್ದಲ್ಲಿ ಇತರ ಶಿಷ್ಯರಿಗೆ ಹೇಗೆ ಸಮಾಶ್ರಯಣಮಾಡಬಹುದು ? ತಾನು ಜ್ಞಾನ ವಂತನು, ಆಚಾರವಂತನು ಎಂದುಕೊಳ್ಳುವುದು ಜ್ಞಾನಾಧಿಕ ಲಕ್ಷಣವೇ? ಗುಣದೋಷಗಳನ್ನು ಎಣಿಸಬೇಕೆಂದು ಹೊರಟರೆ ಸರ್ವತ್ರ ಸಮನಾಗಿಯೇ ಇರುವುದು ಕಾಣಬರುವುದು. ಆಚಾರ್ಯ ಪುರುಷನಾದವನು ಹೊಸದಾಗಿ ತನ್ನನ್ನಾಶ್ರಯಿಸಲು ಬಂದವನನ್ನು ನೀನು ಇದುವರೆಗೂ ಯಾರ ಶಿಷ್ಯನೆಂದು ವಿಚಾರಿಸದೆಯೇ ತನ್ನ ಹತ್ತಿರ ಬಂದ ಮಾತ್ರದಿಂದಲೇ ತನಗೆ ಆಧಿಕ್ಯ ಬಂದಂತೆ ಭಾವಸಿ ಸಂತೋಷದಿಂದ ಪಂಚಸಂಸ್ಕಾರಾದಿ ಗಳನ್ನು ಮಾಡಿ ತನಗೆ ಶಿಷ್ಯನನ್ನಾಗಿ ಮಾಡಿಕೊಳ್ಳುವುದು ಸರಿಯಲ್ಲ.

ಮೊತ್ತದಲ್ಲಿ ಭಾವವೇನಂದರೆ— ಕೆಲವರು, ಕುಲಕ್ರಮಾಗತವಾಗಿ ಬಂದ ಆಚಾರ್ಯರುಗಳು ಅಥವಾ ಅವರ ಉತ್ತರಾಧಿಕಾರಿಗಳು ಜ್ಞಾನಾಧಿ ಕರಲ್ಲವೇ ಇರುವುದನ್ನು ನೋಡಿಯೋ ಅಥವಾ ಸಮುದಾಯ ಮತ್ತು ರಕ್ತಸಂಬಂಧ ಇವೇ ಮೊದಲಾದುವಗಳ ಪರಿಸ್ಥಿತಿಯಿಂದುಂಟಾದ ಕಾಮಕ್ರೋಧಾದಿಗಳಿಂದಲೋ ಅವರನ್ನು ಬಿಟ್ಟು ಇತರರನ್ನಾಶ್ರಯಿ ಸುವುದು ಕಂಡುಬರುವುದು. ಕುಲಕ್ರಮಾಗತಾಚಾರ್ಯರುಗಳು ಆಚಾರ ವ್ಯವಹಾರಾದಿಗಳಲ್ಲಿ ಕಡಿಮೆಯೆಂದೂ, ವಿದ್ಯೆ ಅನುಷ್ಠಾನಗಳಿಲ್ಲದ ಗುರುವನ್ನು ಆಶ್ರಯಿಸಕೂಡದೆಂದು ಶಾಸ್ತ್ರವು ಹೇಳುವುದರಿಂದ ನಾವು ಬಿಟ್ಟಿರುವೆವು. ಎಂದು ವಾದಮಾಡುವರು. ಈ ಮಾತುಗಳು ಕಾಮ ಕ್ರೋಧಾದಿಗಳನ್ನು ಅನುಸರಿಸಿದವುಗಳಾಗಿರುವುವು. ಮೇಲೆ ವಿವರಿಸಿರುವಂತೆ ಶಾಸ್ತ್ರ ಬದ್ಧವಾಗಿರುವುದಿಲ್ಲ. ಕುಲಾಚಾರ್ಯರ ಅಭಾವದ ಕಾಲದಲ್ಲಿ ಮಾತ್ರ ಇತರತ್ರ ಆಶ್ರಯಿಸಬಹುದೆಂದು ಹೇಳಿರುವುದು.

ಪ್ರಕೃತ ಅನೇಕ ವಿಧವಾಗಿ ಆಧುನಿಕಾಭಿಪ್ರಾಯದಿಂದ ಪ್ರಶ್ನೆಗಳು ಪ್ರತಿನಿಮಿಷದಲ್ಲಿಯೂ ಹೊಸಹೊಸದಾಗಿ ಉದ್ಭವಿಸುತ್ತಿರುವುದು ಕಂಡು ಬರುತ್ತಿವೆ. ಪ್ರಕೃತ ಈ ಗ್ರಂಥಕ್ಕೆ ಮೂಲ ಕಾರಣವಾಗಿ ಉಂಟಾದ ಸಂದರ್ಭದಿಂದ ಕೆಲವು ವಿಷಯಗಳನ್ನು ಪ್ರಶ್ನೋತ್ತರ ರೂಪವಾಗಿ ವಿಮರ್ಶಿಸಲ್ಪಟ್ಟಿದೆ.

ಸದಾಚಾರ್ಯರು ಎಷ್ಟುವಿಧವಾಗಿರುವರು ?

ಸದಾಚಾರ್ಯರಲ್ಲಿ ಉತ್ತಾರಕರೆಂದೂ, ಉಪಕಾರಕರೆಂದೂ ಎರಡು ಪ್ರಕಾರವಾಗಿರುವರು. ಉತ್ತಾರಕರೆಂದರೆ ತಿರುಮಂತ್ರ, ದ್ವಯ ಚರಮ ಮಂತ್ರಗಳನ್ನು ಉಪದೇಶಿಸುವವರು.—ಎಂದರೆ ಆತ್ಮೋಜ್ಜೀವನ ಸಾಧಕವಾದ ಈ ಮಂತ್ರಗಳನ್ನು ಉಪದೇಶಿಸುವವರು. ಇತರ ಮಂತ್ರ ಗಳನ್ನು ಉಪದೇಶಿಸುವವರು ಸಂಸಾರವರ್ಧಕರೇ ಆಗುವರು. ಆದುದರಿಂದ ಉತ್ತಾರಕರಾಗುವುದಿಲ್ಲ.

ಉಪಕಾರಕರೆಂದರೆ ಆ ಮಂತ್ರಾರ್ಥಗಳನ್ನೂ, ಆಧ್ಯಾತ್ಮಿಕ ಪ್ರಬಂಧ ಗಳನ್ನೂ ಎಂದರೆ ಅಷ್ಟಾದಶ ರಹಸ್ಯಗಳನ್ನೂ ಉಭಯ ವೇದಾಂತಾರ್ಥ ಗಳನ್ನೂ ಉಪದೇಶಿಸುವವರು.

———

ಶಿಷ್ಯನಿಗೆ ಮಂತ್ರಮಂತ್ರಾರ್ಥಗಳನ್ನು ಉಪದೇಶಿಸುವ ಆಚಾರ್ಯರು ಒಬ್ಬರೇ ಆಗಿಲ್ಲದೆ ಬೇರೆಬೇರೆಯಾಗಿದ್ದಲ್ಲಿ ಅವರಿಬ್ಬರಿಗೆ ತಾರತಮ್ಯವುಂಟೆ?

ಅವರಿಬ್ಬರೂ ಭಗವಂತನ ಎರಡು ಪಾದಗಳಂತಿರುವರು. ಅವರಿಬ್ಬರ ಸನ್ನಿಧಿಯಲ್ಲೂ ಸಮಾನ ಭಕ್ತಿ ಗೌರವಗಳಿಂದ ಕೂಡಿ ಪ್ರವರ್ತಿಸಬೇಕು. ಹಾಗಿಲ್ಲದೆ ಪಕ್ಷಪಾತ ಮಾಡಿದಲ್ಲಿ ಶ್ರಿಯಃಪತಿಯ ಪಾದಾರವಿಂದಗಳಲ್ಲಿ ಒಂದು ಪಾದವನ್ನಾಶ್ರಯಿಸಿ ಮತ್ತೊಂದನ್ನು ಬಿಟ್ಟಂತಾಗುವುದು.

———

ಮಂತ್ರಮಂತ್ರಾರ್ಥಗಳನ್ನು ಉಪದೇಶಿಸಿದ ಆಚಾರ್ಯರಿಬ್ಬರಲ್ಲೂ ಜ್ಞಾನಾನುಷ್ಠಾನಗಳಲ್ಲಿ ವ್ಯತ್ಯಾಸವಿದ್ದಲ್ಲಿ ಶಿಷ್ಯನು ಅವರಿಬ್ಬರನ್ನು ಹೇಗೆ ಭಾವಿಸಬೇಕು ?

ಅವರಿಬ್ಬರಲ್ಲಿ ಯಾರು ಜ್ಞಾನಾನುಷ್ಠಾನದಲ್ಲಿ ಅಧಿಕರೋ ಅವರನ್ನು ದೋಣಿ ನಡೆಸುವ ಅಂಬಿಗನಂತೆ ಉತ್ತಾರಕರೆಂದೂ, ಇನ್ನೊಬ್ಬರನ್ನು ದೋಣಿಯಂತೆ ಉಪಕಾರಕರೆಂದೂ ಭಾವಿಸಬೇಕು. ನದಿಯನ್ನು ದಾಟಲು ಅಂಬಿಗನೂ, ದೋಣಿಯೂ ಎರಡೂ ಆವಶ್ಯಕವೇ.

—೦—

೪. ಶಿಷ್ಯನಿಂದ ಆಚಾರ್ಯನು ಉಜ್ಜೀವಿಸಲ್ಪಡುವನು. ಎನ್ನುವುದು ಸಮಂಜಸವೆ ? ಪ್ರಮಾಣ ಸಿದ್ಧವೆ ?

ಒಬ್ಬ ಭಗವದ್ಭಕ್ತನ ಅನುಗ್ರಹಕ್ಕೆ ಪಾತ್ರವಾದ ಪಶುಪಕ್ಷಿ ಮೊದಲಾದುವಗಳಿಗೇ ಮೋಕ್ಷವು ಸಿದ್ಧವೆಂದು ಪ್ರಮಾಣವಿರುವುದು. ಅಂತೆಯೇ ಸಚ್ಛಿಷ್ಯನಾದವನಿಗೆ ತನ್ನ ಗುರುಗಳಿಗೆ ಮೋಕ್ಷವಾಗಬೇಕು ಎನ್ನುವ ಸಂಕಲ್ಪವಿದ್ದಲ್ಲಿ ಆ ಗುರುಗಳು ಏಕೆ ಮೋಕ್ಷವನ್ನು ಹೊಂದುವುದಿಲ್ಲ ? ತನಗೆ ಪರಮ ಶತ್ರುವಾಗಿ ಭಾಗವತಾಪಚಾರಮಾಡಿದ ಹಿರಣ್ಯಕಶ್ಯಪುವನ್ನು ಪ್ರಹ್ಲಾದನ ಪ್ರಾರ್ಥನೆಯಿಂದ ಭಗವಂತನು ಹಿರಣ್ಯಕಶ್ಯಪುವನ್ನು ನಿರ್ದೋಷಿಯಾಗಿ ಭಾವಿಸಿದನು.

ಅಲ್ಲದೆ ಶ್ರೀರಾಮಾನುಜಾಚಾರ್ಯರು ಕೂಡ ತಮಗೆ ಅತ್ಯಂತ ಪ್ರಿಯ ಶಿಷ್ಯರೂ, ತಮಗಿಂತಲೂ ಜ್ಞಾನಾನುಷ್ಠಾನದಲ್ಲಿ ಅಗ್ರೇಸರರೂ, ಆದ ಕೂರತ್ತಾಳ್ವಾರ ಸಂಬಂಧದಿಂದ ತಮಗೆ ತಪ್ಪದೆ ಪರಮಪದವು ಲಭಿಸುವುದೆಂದು ಕೇಳಿ ವಿಶ್ವಾಸದಿಂದ ಎದ್ದು ಹಾರಾಡಿದರೆಂದು ಚರಿತ್ರೆಗಳಿಂದ ತಿಳಿಯಬರುತ್ತದೆ.

———

ಸಮಾಶ್ರಯಣ ಮಂತ್ರೋಪದೇಶವನ್ನು ಯಾರು ಯಾರು ಮಾಡಬಹುದು?

ಶ್ರೀವೈಷ್ಣವಮತಕ್ಕೆ ಸೇರಿ ಸಮಾಶ್ರಯಣ ಮಂತ್ರೋಪದೇಶವನ್ನು ಹೊಂದಿದ ಸಮಸ್ತರೂ ತಮ್ಮ ಮುಂದಿನವರಿಗೆ ಸಮಾಶ್ರಯಣ ಮಂತ್ರೋಪದೇಶಗಳನ್ನು ಮಾಡಬಹುದು. ತನಗೆ ಬಂದ ಆಸ್ತಿಯನ್ನು ಯಾವ

ರೀತಿಯಲ್ಲಿ ತನ್ನ ಮಕ್ಕಳಿಗೂ ಬಂಧುಮಿತ್ರ ಪರಿವಾರದವರಿಗೂ ಕೊಡು ವನೋ ಅದೇರೀತಿಯಲ್ಲಿ ತನಗೆ ಬಂದ ವಿದ್ಯೆಯನ್ನೂ ಜ್ಞಾನವನ್ನೂ ಸಹ ಕೊಡಬಹುದು. ಆದರೆ ಇದರಲ್ಲಿ ಸ್ತ್ರೀಯರೂ ಸೇರಿ ಉಪದೇಶವನ್ನು ಹೊಂದುವುದರಿಂದ ಅವರೂ ಸಮಾಶ್ರಯಣ ಮಂತ್ರೋಪದೇಶಮಾಡ ಬಹುದೇ ಎಂದರೆ ಅವರೂ ಮಾಡಬಹುದು. ನಮಗೆ ರಹಸ್ಯಮಂತ್ರವೂ, ವೇದಭಾಗಗಳೂ ಲಕ್ಷ್ಮೀ, ಭೂದೇವೀ, ಕಾತ್ಯಾಯಿನೀ, ಗಾರ್ಗೀ ಮುಂತಾದ ಸ್ತ್ರೀಯರಿಂದಲೇ ಬಂದಿರುವುದು. ಆದರೆ ಲೋಕದಲ್ಲಿನ ನಮ್ಮ ಸ್ತ್ರೀಯರು ಅಧಿಕಾರದಲ್ಲಿಯೂ, ಜ್ಞಾನದಲ್ಲಿಯೂ ಸಹ ಮೇಲಿನ ಸ್ತ್ರೀಯ ರಂತಿಲ್ಲದೆ ಸಾಮಾನ್ಯ ಪ್ರಜೆಗಳಾಗಿರುವುದರಿಂದಲೂ ಮತ್ತು ಅವರ ಶರೀರದಾರ್ಢ್ಯ, ಮನಸ್ಸು, ಜ್ಞಾನ, ಮುಂತಾದವುಗಳನ್ನೂ ಪರಿಶೀಲಿಸಿ ಎಲ್ಲಾ ವ್ಯವಹಾರಗಳನ್ನೂ ಅಂಗಅಂಗಿಭಾವದಿಂದ ಪುರುಷರ ಮೂಲಕ ವಾಗಿಯೇ ನಡೆಸಿ ಬರುವುದು ಪದ್ಧತಿಯಾಗಿದೆ.

ಪುರುಷರೆಲ್ಲರಿಗೂ ಅಧಿಕಾರ ಬಂದಮೇಲೆ ವರ್ಣೇತರರಿಗೂ ಸಮಾಶ್ರಯಣ ಮಂತ್ರೋಪದೇಶಗಳಾಗುವುದರಿಂದ ಅವರು ಉಪದೇಶ ಮಾಡಬಹುದೇ ? ಎಂದರೆ ಅವರೂ ಮಾಡಬಹುದು. ನಮ್ಮಾಳ್ವಾರೇ ಮುಂತಾದವರಿಂದ ನಮಗೆ ಮಂತ್ರೋಪದೇಶವು ಬಂದಿರುವುದು. ಆದರೆ ರಹಸ್ಯತ್ರಯ ಮಂತ್ರೋಪದೇಶವು ಸಿದ್ಧಿಸಬೇಕಾದರೆ ಅದು ಕರ್ಮಕಾಂಡವನ್ನು ಅನುಸರಿಸಿಯೇ ಇರುವುದರಿಂದಲೂ, ಆ ಕರ್ಮ ಕಾಂಡವು ವೇದಮಂತ್ರಗಳಿಂದ ಕೂಡಿರುವುದರಿಂದಲೂ, ಮತ್ತು ವೇದಮಂತ್ರಗಳ ಉಪದೇಶವು ಸ್ತ್ರೀಶೂದ್ರಾದಿಗಳಿಗೆ ಇಲ್ಲದ್ದರಿಂದಲೂ "ಜನ್ಮತಃ ಶ್ರೇಯಾನ್" "ವರ್ಣಾನಾಂ ಬ್ರಾಹ್ಮಣೋಗುರುಃ" ಎಂಬುದಾಗಿ ಉಪದೇಶಾಧಿಕಾರವನ್ನು ಬ್ರಾಹ್ಮಣ ವರ್ಗದಲ್ಲಿಯೇ ಇಟ್ಟಿರುತ್ತಾರಾದ್ದರಿಂದ ಬ್ರಾಹ್ಮಣರೇ ಉಪದೇಶ ಮಾಡಬೇಕಾಗಿರುವುದು. ನಮ್ಮಾಳ್ವಾರ್ರವರೂ ಶಾಸ್ತ್ರ ಬದ್ಧರಾದ್ದರಿಂದ ಇದನ್ನನುಸರಿಸಿಯೇ ತಮ್ಮ ಶರೀರವನ್ನು ಬಿಟ್ಟು ಯೋಗ ಶರೀರದಿಂದ ಬಂದು ನಾಥಮುನಿಗಳಿಗೆ ಮಂತ್ರೋಪ ದೇಶವನ್ನು ಮಾಡಿರುವರು.

ಇನ್ನು ಬ್ರಾಹ್ಮಣ ಶ್ರೀವೈಷ್ಣವರೆಲ್ಲರೂ ಸಮಾಶ್ರಯಣ ಮಾಡಬಹುದೇ ? ಎಂದರೆ ಆಗಬಹುದು. ಆದರೆ ಪ್ರತಿಯೊಬ್ಬನೂ ಸಮಾಶ್ರಯಣ ಮಾಡುವುದಾದರೆ ಶಿಷ್ಯನಾಗುವವನು ಯಾರು. ? ತಂದೆಯೇ ತನ್ನ ಹೆಂಡತಿ ಮಕ್ಕಳಿಗೆ ಬಂಧುಗಳಿಗೆ ಉಪದೇಶ ಮಾಡುವುದಾದರೆ ಶರೀರ ಸಂಬಂಧದಿಂದ ಆಗಿಂದಾಗ್ಯೆ ಉಭಯತ: ಕಾಮಕ್ರೋಧಾದಿಗಳು ಉಂಟಾಗವುದು ಸಹಜವಾಗಿರುವುದರಿಂದಲೂ, ಗುರುಶಿಷ್ಯ ಸ್ಥಳದಲ್ಲಿ ಈ ಕಾಮಕ್ರೋಧಾದಿಗಳು ಇರಲಾಗದ್ದರಿಂದ ಜ್ಞಾನ, ಅನುಷ್ಠಾನ ನಿಷ್ಠೆಯಿಂದ ಕೂಡಿದ ಉಪದೇಶಗುರಗಳೇ ಬೇರೆಯಾಗಿ ಏರ್ಪಟ್ಟಿರುವರು.

ಅವರು ಮಾತ್ರ ಸಮಾಶ್ರಯಣ ಮಂತ್ರೋಪದೇಶವನ್ನು ಮಾಡಲು ಅಧಿಕಾರ ಪಡೆದಿರುವರು. ಅವರಿಗೆ ಆಚಾರ್ಯಪುರುಷರೆಂದೂ, ಮಠಾಧಿಪತಿಗಳೆಂದೂ ಕರೆಯುವರು.

—೦—

೬. ಸಮಾಶ್ರಯಣ ಮಂತ್ರೋಪದೇಶವನ್ನು ಯಾರುಯಾರು ಹೊಂದಬಹುದು ? ಎಲ್ಲರಿಗೂ ಅಧಿಕಾರವುಂಟೆ ?

ಈ ಲೋಕದಲ್ಲಿ ಹುಟ್ಟಿದ ಪ್ರತಿಯೊಂದು ಜೀವವುಳ್ಳ ಮನುಷ್ಯ, ಪಶು, ಪಕ್ಷಿ, ಮೃಗ, ಹುಳು, ಹುಪ್ಪಟೆ ಆದಿಯಾಗಿ ಎಲ್ಲರೂ ಸಮಾಶ್ರಯಣ ಮಂತ್ರೋಪದೇಶವನ್ನು ಹೊಂದಿ ಈ ಜನ್ಮದಲ್ಲೇ ಮೋಕ್ಷಹೊಂದಲು ಅವಕಾಶವುಂಟು ಎಂಬುದಾಗಿ ನಮ್ಮ ಸಿದ್ಧಾಂತವು.

ಆದರೆ ಶರೀರ, ಜ್ಞಾನ, ಆಕಾರ ಅವಸ್ಥೆ ದೇಶ, ಕಾಲಭೇದ ಇವುಗಳನ್ನು ಪರಿಗಣಿಸಿಯೂ ಮತ್ತು ಇದರೊಂದಿಗೆ ಬಲವಾದ ಶಾಸ್ತ್ರಪಂಕ್ತಿಯನ್ನೂ ಸೇರಿಸಿ ನಿರ್ಬಂಧಿಸಲಾಗಿದೆ. ಆದರೆ ಪಶು ಪಕ್ಷಿ ಮೃಗಾದಿಗಳಿಗೂ, ವರ್ಣಾಶ್ರಮೇತರರಿಗೂ ಹೇಗೆ ಮೋಕ್ಷವುಂಟಾಗುವುದೆಂದರೆ "ಪಶು ರ್ಮನುಷ್ಯಃ ಪಕ್ಷೀ ವಾ ಯೇಚವೈಷ್ಣವ ಸಂಶ್ರಯಾಃ" ಎನ್ನುವಂತೆ ಶ್ರೀವೈಷ್ಣವನ ಸಂಪರ್ಕದಿಂದಲೂ ಅದನ್ನನುಸರಿಸಿದ ಭಗವತ್ಕಟಾಕ್ಷದಿಂದಲೂ ಈ ಜನ್ಮದಲ್ಲೇ ಮೋಕ್ಷವು ಲಭಿಸುವುದು.

—೦—

೭. ಸನ್ಯಾಸಿ ಮತ್ತು ಮಠಾಧಿಪತ್ಯದಿಂದ ಕೂಡಿದ ಸಮಾಶ್ರಯಣ ಪರಂಪರೆ. ಅಥವಾ ಆಶ್ರಯಣದಿಂದ ಕೂಡಿದ ಆಶ್ರಮಪರಂಪರೆ ಅಥವಾ ಮಠಪರಂಪರೆ.

ಈ ವಿಚಾರವನ್ನು ಜ್ಞಾನ ಸಂತಾನ ವಿಚಾರವಾದ ಶಿಷ್ಯಾಚಾರ್ಯ ಪ್ರಕರಣದಲ್ಲಿ ವಿವರಿಸಿದೆ. ಶ್ರೀರಾಮಾನುಜಾಚಾರ್ಯರು ಪೆರಿಯನಂಬಿಗಳ ಹತ್ತಿರ ಸಮಾಶ್ರಯಣ ಮನ್ತ್ರೋಪದೇಶವನ್ನು ಹೊಂದಿದರು. ಅವರಲ್ಲೇ ಸನ್ಯಾಸಾಶ್ರಮವನ್ನೂ ಸ್ವೀಕರಿಸಬಹುದಾಗಿತ್ತು. ಆದರೆ ಗೃಹಸ್ಥರಿಗೆ ಸನ್ಯಾಸಮಂತ್ರೋಪದೇಶವನ್ನು ಮಾಡಲು ಅಧಿಕಾರವಿಲ್ಲವಾದ್ದರಿಂದ ಶ್ರೀರಾಮಾನುಜಾಚಾರ್ಯರು ಸಾಕ್ಷಾತ್ ಮಂತ್ರೋಪದೇಷ್ಟನಾದ ವರದರಾಜ ದೇವರಲ್ಲಿಯೇ ಆಶ್ರಮವನ್ನೂ ಸ್ವೀಕರಿಸಿದರು. ಅಲ್ಲದೆ ತಾವು ವಿಶಿಷ್ಟಾದ್ವೈತವೇದಾಂತವನ್ನು ಪ್ರಚಾರಪಡಿಸಲು ಏರ್ಪಡಿಸಿದ ೭೪ ಜನ ಸಿಂಹಾಸನಾಧಿಪತಿಗಳಲ್ಲಿ ಅನೇಕರು ಸನ್ಯಾಸಿಗಳಾಗಿಯೂ, ಗೃಹಸ್ಥರಾಗಿಯೂ ಇರುವುದನ್ನು ನೋಡಿ ಈ ಪರಂಪರೆಯಲ್ಲಿ ಮುಂದೆ ವ್ಯತ್ಯಾಸ ಬರಬಹುದೆಂದಾಲೋಚಿಸಿ ಅದಕ್ಕೆ ಅವಕಾಶವಿಲ್ಲದಂತೆ ಗೃಹಸ್ಥ ಸಿಂಹಾಸನಸ್ಥರನ್ನೂ ಸನ್ಯಾಸಿಗಳನ್ನೂ ಬೇರೆ ಬೇರೆ ಮಾಡಿ ಅವರಿಗೆ ತಾವೇ ಸಮಾಶ್ರಯಣಾದಿ ಮಂತ್ರೋಪದೇಶಗಳನ್ನು ಮಾಡಿ ವಿರಕ್ತರಿಗೆ ಆಶ್ರಮವನ್ನು ಕೊಟ್ಟು ಮಠಾಧಿಪತಿಗಳನ್ನಾಗಿ ಮಾಡಿ ತಮ್ಮ ತಮ್ಮ ಮುಂದಿನವರಿಗೆ ಪರಂಪರೆಯಾಗಿ ಉಪದೇಶಿಸುವಂತೆ ಕಟ್ಟಳೆಯಿಟ್ಟರು. ಈ ರೀತಿ ಏರ್ಪಟ್ಟ ಸನ್ಯಾಸಿ ಮಠಾಧಿಪತಿಗಳು ತಮ್ಮಲ್ಲಿ ಆಶ್ರಯಿಸಿದ ಶಿಷ್ಯರಿಗೆ ಮಂತ್ರೋಪದೇಶವನ್ನೂ ವಿರಕ್ತರಿಗೆ ಆಶ್ರಮವನ್ನೂ ಕೊಡುತ್ತಾ ಬರುತ್ತಿರುವುದಕ್ಕೆ ಮಠಪರಂಪರೆ ಎಂದು ಹೆಸರು.

—೦—

೮. ನಾವು ಗುರುಗಳಲ್ಲಿ ಸಮಾಶ್ರಯಣವಾದಮೇಲೆ ಆ ಗುರುಗಳ ಉತ್ತರಾಧಿಕಾರಿಗಳಿಗೂ, ನಮಗೂ ಸಂಬಂಧವು ಹೇಗೆ?

ಈ ವಿಚಾರವನ್ನು ವಾಕ್ಯಗುರುಪರಂಪರಾ ವ್ಯಾಖ್ಯಾನದಲ್ಲಿಯೆ ವಿವರಿಸಿರುವುದು. ಆಳವಂದಾರ್ರು, ನಾಥಮುನಿಗಳು, ಎಂಬಾರು,

ಕೂರತ್ತಾಳ್ವಾರ್ ಇತ್ಯಾದಿ ಮುಂದಿನವರಿಗೂ, ಹಿಂದಿನವರಿಗೂ ಹೇಗೆ ಶ್ರೀರಾಮಾನುಜಾಚಾರ್ಯರು ಉತ್ತಾರಕಾಚಾರ್ಯರೆಂದು ಪರಿಗಣಿಸಲ್ಪಟ್ಟಿರುವರೋ ಅದೇ ರೀತಿಯಲ್ಲಿ ಸ್ವಾಚಾರ್ಯರಾದನಂತರ ಬಂದ ಉತ್ತರಾಧಿಕಾರಿಗಳೂ ಸಹ ಉತ್ತಾರಕಾಚಾರ್ಯರಾದ್ದರಿಂದ ಗೋಬಲಿವರ್ದನ್ಯಾಯದಂತೆ ಅವರೂ ಸಹ ನಮಗೆ ಸ್ವಾಚಾರ್ಯ ಸಮಾನರೇ ಆಗುವರು. ಆ ಆಚಾರ್ಯಪುತ್ರರೂ ಮುಂದಿನ ಉತ್ತರಾಧಿಕಾರಿ ಮಠಾಧಿಪತಿಗಳೂ ಇಬ್ಬರೂ ಸ್ವಾಚಾರ್ಯ ಸಮಾನರೇ.

—o—

೯. ಮಠ ಪರಂಪರೆಯಲ್ಲಿ ಸೇರದ ಇತರ ಪರಂಪರೆಯವರು ಆಶ್ರಮ ವಹಿಸಿ ಬಂದಲ್ಲಿ ಮಠ ಪರಂಪರೆಯನ್ನು ಆಶ್ರಯಿಸಿ ಪರಂಪರೆಯಾಗಿ ಬರುವ ಶಿಷ್ಯನಿಗೆ ಯಾವ ಪರಂಪರೆಯನ್ನು ಉಪದೇಶಿಸಬೇಕು?

ಪರಂಪರೆಯೆಂಬುದನ್ನು ಒಪ್ಪಿಕೊಂಡಲ್ಲಿ ಅದು ಪ್ರತಿಯೊಬ್ಬ ಶಿಷ್ಯನಿಗೂ ಅನ್ವಯಿಸಲೇ ಬೇಕು. ಪರಂಪರೆಯೆಂಬ ಸ್ಥಳದಲ್ಲಿ ಆಶ್ರಯಿಸುವುದು ಮತ್ತು ಆ ಪರಂಪರಾ ನಾಮವನ್ನು ಅನುಸಂಧಿಸುವುದು ಇವೆರಡಕ್ಕೂ ಶ್ರದ್ಧಾಭಕ್ತಿ ಪ್ರೀತಿಯೇ ಕಾರಣವು. ಶಿಷ್ಯನಿಗೆ ಇರುವ ಶ್ರದ್ಧಾಭಕ್ತಿ ಪ್ರೀತಿಯು ಇತರರಿಗಿರುವುದಿಲ್ಲ. ಪರಂಪರೆಯೇ ಇಲ್ಲವೆಂದು ಹೇಳಿದಾಗಲೂ, ಅಥವಾ ಶಿಷ್ಯನಲ್ಲದವನಿಗೂ ಶ್ರೀಮಠದಲ್ಲಿ ಶ್ರದ್ಧಾಭಕ್ತಿ ಪ್ರೀತಿಗಳಿರುವುದೆಂದೂ ಹೇಳಿದರೆ ವ್ಯಕ್ತಿಗತವಾದ ಆಚಾರ್ಯನನ್ನು ಬಿಟ್ಟು "ಸಂಘೇಶಕ್ತಿಃ" ಎನ್ನುವಂತೆ ಸಂಸ್ಥೆಯ ಮತ್ತು ದೇಶ ಗುರುಗಳಾದ ಮಠದ ಪೀಠಾಧಿಪತಿಗಳಲ್ಲಿ ತಮ್ಮ ಮಕ್ಕಳಿಗೆ ಏಕೆ ಸಮಾಶ್ರಯಣ ಮಾಡಿಸಬಾರದು? ಆಗ ಹಿಂದಿನಿಂದ ಬಂದ ಪರಂಪರಾ ಅಭಿಮಾನವು ಬಾಧಿಸುವುದಲ್ಲದೆ ಶಾಸ್ತ್ರವೂ ಸಹ ಪೂರ್ವಾಚಾರ್ಯರನ್ನೇ ಆಶ್ರಯಿಸು, ಬಿಡಬೇಡ ಎಂದು ಹೇಳುವುದು.

೧. **ಆಚಾರ್ಯನದೃಷ್ಟ್ಯಾ—** ಮೊದಲು ಶಿಷ್ಯನಲ್ಲದವನಿಗೆ ಶ್ರೀಮಠದಲ್ಲಿ ಆಧಿಪತ್ಯವನ್ನು ಕೊಡುವುದೇ ಇಲ್ಲ. ಒಂದುವೇಳೆ ಕೊಟ್ಟರೂ ಬಂದ ಆಚಾರ್ಯನು ಶಿಷ್ಯನ ಏಳಿಗೆಗಾಗಿಯೇ ಇರುವನೆಂಬುದು

ಸಿದ್ಧವು. ತನಗೆ ಎಷ್ಟೇ ಕಷ್ಟವಾದರೂ ಶಿಷ್ಯನು ಸ್ಮೃತ್ಯಾದಿ ಧರ್ಮ ಶಾಸ್ತ್ರಗಳನ್ನೂ, ಅವನ ಪರಂಪರೆಯನ್ನೂ ಸಂಪ್ರದಾಯವನ್ನೂ ಕಾಪಾಡಿ ಕೊಂಡು ಬರಬೇಕೆಂಬುದೇ ಆಚಾರ್ಯನ ಉದ್ದೇಶವು. ಅದರಂತೆ ನಡೆಯುವಂತೆ ನೋಡಿಕೊಳ್ಳುವುದೇ ಆಚಾರ್ಯನ ಕರ್ತವ್ಯವಾದ್ದರಿಂದ ಅವನಿಗೆ ಪುರೋಹಿತನೆಂಬ ಬಿರುದೂ ಇರುವುದು.

"ಸ್ವಧರ್ಮೇ ನಿಧನಂ ಶ್ರೇಯ: ಪರಧರ್ಮೋ ಭಯಾವಹಃ" ಎಂದು ತನ್ನ ಸಂಪ್ರದಾಯವನ್ನೂ, ಶಾಸ್ತ್ರವನ್ನೂ ಕಾಪಾಡಿಕೊಂಡು ಬರಬೇಕೆಂಬುದಾಗಿ ಉಪದೇಶಿಸುವವನೇ ಆಚಾರ್ಯನು. "ಶಿಷ್ಯಪಾಪಂ ಗುರೋರಪಿ" ಎಂದು ಶಿಷ್ಯನ ಮೇಲ್ಮೆಯನ್ನೇ ಇಟ್ಟುಕೊಂಡು ಅವನು ಮಾಡುವ ಪಾಪವನ್ನೂ ಕೂಡ ಹೊತ್ತುಕೊಳ್ಳುವುದರಿಂದಲೂ, ಅಲ್ಲದೆ ಶಿಷ್ಯನು ಸ್ಮೃತ್ಯಾದಿ ಧರ್ಮಶಾಸ್ತ್ರಗಳಿಂದಲೂ, ಅವನ ಹಿರಿಯರ ಪರಂಪರೆಯನ್ನು ಅವನು ತಪ್ಪಿ ನಡೆಯದೆ ಇರುವಂತೆ ಅವನಿಗೆ "ನಿನ್ನದು ಈ ಪರಂಪರೆ ಅದನ್ನು ಅನುಸರಿಸು." ಎಂದು ತಿಳಿಸಿ ಆ ರೀತಿಯಲ್ಲಿ ಉಪದೇಶಮಾಡಿ ಬರುವುದೇ ಆಚಾರ್ಯನ ಕರ್ತವ್ಯವಾಗಿರುವುದು.

೨. **ಶಿಷ್ಯನದೃಷ್ಟ್ಯಾ**— ತಂದೆಯು ಯಾವ ಪರಂಪರೆಯ ಆಚಾರ್ಯನನ್ನು ಅನುಸರಿಸಿರುವನೋ ಮಗನೂ ಸಹ ಆ ಗುರುವನ್ನೇ ಆಗಲಿ ಅಥವಾ ಆ ಗುರುವಿನ ಶಿಷ್ಯ ಅಥವಾ ಮಗನನ್ನಾಗಲಿ ಆಶ್ರಯಿಸ ಬೇಕು. ಹಾಗಿದ್ದರೇನೇ "ನಮ್ಮ ಕುಲಗುರುಗಳು" ಎಂದು ಹೇಳಿಕೊಳ್ಳ ಬಹುದು. ಹಾಗಿಲ್ಲದೆ ತಂದೆಗೆ ಒಬ್ಬ ಗುರುಗಳು ಮಗನಿಗೆ ಬೇರೆ, ಮೊಮ್ಮಗನಿಗೆ, ಇನ್ನೊಬ್ಬರು ಆದರೆ ತನ್ನ ಕುಲಗುರುಪರಂಪರೆಯನ್ನು ಬಿಟ್ಟು ಅನ್ಯ ಕುಲಗುರುವನ್ನು ಹೊಂದಿದಂತೆ ಆಗಿ ತ್ರಿಶಂಕುಸ್ವರ್ಗವೇ ಆಗುವುದು. ಈ ವಿಷಯವನ್ನು ಹಿಂದೆಯೇ ವಿವರಿಸಿದೆ. ಆದ್ದರಿಂದ ಶಿಷ್ಯನದೃಷ್ಟ್ಯಾ ತನ್ನ ತಂದೆಯ ಗುರುಪರಂಪರೆಯನ್ನೇ ಪ್ರಕೃತ ಮಠ ಪರಂಪರೆಯನ್ನೇ ಉಪದೇಶ ಹೊಂದಿ ಅದನ್ನೇ ಅನುಸಂಧಿಸಬೇಕು.

೩. **ಸಂಸ್ಥೆಯದೃಷ್ಟ್ಯಾ**—ತಾನು ಆಚಾರ್ಯನಾಗಿ ಯಾವಾಗ ಒಂದು ಸಂಸ್ಥೆಗೆ ಸೇರಿದನೋ ಆಗ ಲೌಕಿಕ ವೈದಿಕರೀತ್ಯಾ ಎರಡು ವಿಧದಲ್ಲಿಯೂ

ಆ ಸಂಸ್ಥೆಯ ನಿಯಮಗಳನ್ನನುಸರಿಸುವುದು ನ್ಯಾಯಧರ್ಮವಾಗಿರುವುದು ತನ್ನ ಧರ್ಮಕ್ಕೆ ವಿರೋಧವಾದ ಸಂಸ್ಥೆಯಾದರೆ ಅದಕ್ಕೆ ಸೇರುವುದೇ ಇಲ್ಲ. ಉತ್ತರಾಧಿಕಾರಿಯಾಗಿ ಸನ್ಯಾಸಿಯಾಗಿ ಎಂದರೆ ಶರೀರ ಸಂಬಂಧ ವನ್ನೆಲ್ಲಾ ತ್ಯಜಿಸಿ ಬರುವನಾದ್ದರಿಂದ ತನ್ನ ಪೂರ್ವಾಶ್ರಮದ ಶರೀರ ಸಂಬಂಧವನ್ನು ಹೇಳಕೂಡದು. ಪೂರ್ವಾಶ್ರಮದ ಜ್ಞಾನಸಂಬಂಧವನ್ನೂ ಹೇಳಲೂ ಸಹ ಬಾಧಕವಾಗುವುದು. ಏಕೆಂದರೆ ಆ ಜ್ಞಾನವು ಶರೀರ ಸಂಬಂಧವನ್ನು ಅನುಸರಿಸಿ ಮಿಶ್ರವಾಗಿಯೇ ಇರುವುದು. ಮೋಕ್ಷವು ಜಾತಿಯಿಂದ ಬರುವುದಿಲ್ಲವಾದ್ದರಿಂದ ಪಂಚಸಂಸ್ಕಾರದಿಂದ ಅಷ್ಟಾಕ್ಷರೀ ಮಂತ್ರವನ್ನು ಉಪದೇಶಹೊಂದುವನು. ಸನ್ಯಾಸವೂ ಮೋಕ್ಷಕ್ಕೆ ಕಾರಣವು ಮೋಕ್ಷಾಶ್ರಮವು ಎಂದಮೇಲೆ ಎರಡನೇ ಆವೃತ್ತಿ ಮೋಕ್ಷಮಾರ್ಗ ವನ್ನು ಹಿಡಿದಂತೆಯೇ ಆಗುವುದು. ತದನುಗುಣವಾಗಿ ಹೊಸ ಆಚಾ ರ್ಯನನ್ನು ಹೊಂದುವನು. ಈ ಸನ್ಯಾಸದಲ್ಲಿಯೂ ಅಷ್ಟಾಕ್ಷರೀ ಮಂತ್ರದ (ನಿವೃತ್ತಿಮಾರ್ಗದ) ಅರ್ಥವುಳ್ಳ ಮಂತ್ರವನ್ನೇ ಉಪದೇಶಿಸು ವರು. ಸನ್ಯಾಸ ಮಂತ್ರದರ್ಥವೂ ಅಷ್ಟಾಕ್ಷರೀ ಮಂತ್ರದರ್ಥವೂ ಎರಡೂ ಒಂದೇ! ನಿವೃತ್ತಿಮಾರ್ಗವನ್ನು ಬೋಧಿಸುವುದು. ಮಂತ್ರದಲ್ಲಿ ಶಬ್ದ ಭೇದವೇ ಹೊರತು ಅರ್ಥಭೇದವಿಲ್ಲ. ಮಂತ್ರವು ಸಿದ್ಧಿಸಲು ಪಂಚಸಂಸ್ಕಾರದಂತೆ ಇಲ್ಲಿಯೂ ಹೋಮ, ದಾಸ್ಯನಾಮ ಇತ್ಯಾದಿ ಗಳೆಲ್ಲವೂ ನಡೆಯುವುದು.

೪. **ಸಮುದಾಯದೃಷ್ಟ್ಯಾ**—ಮೋಕ್ಷಕ್ಕೆ ಕಾರಣವಾದ ಪಂಚ ಸಂಸ್ಕಾರ ಮಂತ್ರೋಪದೇಶವನ್ನುಹೊಂದಬೇಕಾದರೆ ಯಾವ ಪರಂಪರೆಯ ಗುರುಗಳಲ್ಲಿ ಹೋಗಿ ಆಶ್ರಯಿಸಿದರೂ ಶ್ರೀರಾಮಾನುಜಾಚಾರ್ಯರ ಹತ್ತಿರಕ್ಕೆ ಸೇರಿಸುವುದು. ಅಲ್ಲಿಂದ ಶ್ರಿಯಃಪತಿಯ ಹತ್ತಿರಕ್ಕೆ ಸೇರುವುದು ಹೀಗಿರುವಾಗ್ಯೆ ಶ್ರೀ ಮಠದಲ್ಲೇ ಏಕೆ ಸಮಾಶ್ರಯಣವಾಗಬೇಕು ? ಒಂದು ಸಂಸ್ಥೆ, ಒಂದು ಸಮುದಾಯ, ಒಂದು ಕಟ್ಟುಪಾಡು, ಒಂದು ಐಕ್ಯದಬಲ, ಇತ್ಯಾದಿ ದೃಷ್ಟಿಗಳಿಂದಲೂ,ಯಾವದೃಷ್ಟಿಯಲ್ಲಿ ನೋಡಿದರೂ ಶಿಷ್ಯನದೃಷ್ಟ್ಯಾ, ಆಚಾರ್ಯನದೃಷ್ಟ್ಯಾ, ಶಾಸ್ತ್ರಸಂಪ್ರದಾಯದೃಷ್ಟ್ಯಾ

ಸಂಸ್ಥೆಯದೃಷ್ಟ್ಯಾ ಸಮುದಾಯದೃಷ್ಟ್ಯಾ ಶ್ರೀಮಠದ ಗುರುಪರಂಪರೆಯನ್ನೇ ಉಪದೇಶಿಸಬೇಕು. ಶಿಷ್ಯನು ಶ್ರೀಮಠದ ಗುರು ಪರಂಪರೆಯನ್ನೇ ಅನುಸಂಧಿಸಬೇಕು.

---

## ದೇವತೆಗಳಿಗೂ ಋಷಿಗಳಿಗೂ ಪಂಚಸಂಸ್ಕಾರಗಳಾಗಿವೆಯೆ ?

ಪಂಚಸಂಸ್ಕಾರ ರಹಸ್ಯತ್ರಯ ಮಂತ್ರೋಪದೇಶಗಳಿಲ್ಲದೆ ದೇವತೆಗಳಿಗಾಗಲಿ ಋಷಿಗಳಿಗಾಗಲಿ ಪರಮಪದವು (ಭಗವತ್ಸಾನ್ನಿಧ್ಯವು) ದುರ್ಲಭವು. ಆದ್ದರಿಂದಲೇ ಅವರುಗಳೂ ಕೂಡ ಸದಾಚಾರ್ಯರಿಂದ ಪಂಚಸಂಸ್ಕಾರ ಮಂತ್ರೋಪದೇಶವನ್ನು ಹೊಂದಿದ ಮೇಲೆಯೇ ಪರಮಪದವನ್ನು ಹೊಂದಿರುವರು. ಹೀಗಿರುವಲ್ಲಿ ಮನುಷ್ಯರಾದ ನಮಗೆ ಆ ಸಂಸ್ಕಾರಗಳಿಲ್ಲದೆ ಇದ್ದಲ್ಲಿ ಮೋಕ್ಷವಿಲ್ಲ, ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕೆ ?

ಈ ರೀತಿಯಲ್ಲಿ ನಮಗೆ ಪಂಚಸಂಸ್ಕಾರವು ಹೊಂದಿಯೇ ತೀರಬೇಕೆಂಬುದು ನ್ಯಾಯಸಿದ್ಧವೆಂಬುದನ್ನು ತಿಳಿಸಲು ದೇವತೆಗಳಿಗೂ ಋಷಿಗಳಿಗೂ ಪಂಚಸಂಸ್ಕಾರಗಳಾಗಿವೆ, ಎಂಬುದನ್ನು ಸೂಚಿಸುವ ಪ್ರಬಲಪ್ರಮಾಣಗಳನ್ನು ಉದಹರಿಸುವೆವು.

ಬ್ರಹ್ಮಾಂಡಪುರಾಣೇ—

"ಭಗವಾನಪಿ ವಿಶ್ವಾತ್ಮಾ ಬ್ರಹ್ಮಾಣಂ ಭಕ್ತವತ್ಸಲಃ
ಅಂಕಯಿತ್ವಾ ಶಂಖಚಕ್ರಾಭ್ಯಾಂ ತತ್ಪುತ್ರಂ ಚ ತದಂಶಜಂ ||
ದ್ವಯಂ ಚ ಮೂಲಮಂತ್ರಂ ಚ ಪ್ರದದೌ ಭಗವಾನ್ ದ್ವಯೋಃ"

ಎಂದರೆ ಭಕ್ತವತ್ಸಲನಾದ ಭಗವಂತನು ಬ್ರಹ್ಮನಿಗೂ ಅವನ ಅಂಶದಿಂದ ಹುಟ್ಟಿದ ಬ್ರಹ್ಮಪುತ್ರನಾದ ನಾರದನಿಗೂ ಶಂಖಚಕ್ರಗಳಿಂದ ಮುದ್ರೆಯನ್ನೂ ಅಷ್ಟಾಕ್ಷರೀ ದ್ವಯ ಮಂತ್ರಗಳನ್ನೂ ಉಪದೇಶಿಸಿದನು.

ಪಾದ್ಮೋತ್ತರೇ—

"ಏವಮುಕ್ತ್ವಾ ವಿಧಾತಾರಂ ದೇವದೇವೋ ಜನಾರ್ದನಃ
ಸ ಚಕ್ರೇಣಾಂಕಯಿತ್ವಾ ತು ತಸ್ಮೈ ಮಂತ್ರಂ ದದೌ ಸ್ವಯಂ ||"

ಎಂದರೆ ಶ್ರಿಯಃಪತಿಯು ಬ್ರಹ್ಮನೊಂದಿಗೆ

ಮೇಲೆ ಹೇಳಿದ ವಿಧದಲ್ಲಿ ಬಲಿಚಕ್ರವರ್ತಿಗೆ ತನ್ನ ಚಕ್ರದಿಂದ ಮುದ್ರೆಯನ್ನು ಒತ್ತಿ ತಾನೇ ಸ್ವಂತವಾಗಿ ಮಂತ್ರೋಪದೇಶಮಾಡಿದನು.

ಪಾದ್ಮೋತ್ತರೇ—

"ಸರ್ವಲೋಕೇಶ್ವರೋ ದೇವೋ ಬ್ರಹ್ಮಾ ಮಮ ಪಿತಾ ಪ್ರಭುಃ
ಮಮಾಪಿ ವಿಧಿವನ್ಮಂತ್ರಂ ಪ್ರದದೌ ಮುನಿಸತ್ತಮಾಃ ||
ತಸ್ಮಾದ್ಯೂಯಂ ಮುನಿಶ್ರೇಷ್ಠಾಃ ಧಾರಯಿತ್ವಾ ಸುದರ್ಶನಂ
ನಾರಾಯಣಪದದ್ವಂದ್ವಂ ಗಚ್ಛಧ್ವಂ ಶರಣಂ ದ್ವಿಜಾಃ ||
ಇತ್ಯುಕ್ತ್ವಾ ಮುನಯಸ್ಸರ್ವೇ ನಾರದೇನ ಮಹರ್ಷಿಣಾ
ದ್ವಯಾಧಿಕಾರಿಣಸ್ಸರ್ವೇ ಯಾತಾ ವಿಷ್ಣೋಃ ಪರಂ ಪದಂ ||
ತಸ್ಮಾತ್ತ್ವಮಪಿ ರಾಜರ್ಷೇ ವಿಷ್ಣುಸಾಯುಜ್ಯಮಿಚ್ಛಸಿ
ದೀಕ್ಷಾಮಾರ್ಗವಿಧಾನೇನ ಧಾರಯಿತ್ವಾ ಸುದರ್ಶನಂ ||
ನಾರಾಯಣಪದದ್ವಂದ್ವಂ ತದೇಕಂ ಶರಣಂ ವ್ರಜ"

"ಓ ಋಷಿಗಳಿರಾ! ನನ್ನ ತಂದೆಯಾದ ಬ್ರಹ್ಮದೇವರು ನನಗೂ ಶಾಸ್ತ್ರೋಕ್ತರೀತಿಯಿಂದ ಮಂತ್ರವನ್ನು ಉಪದೇಶಿಸಿದನು. ಆದ್ದರಿಂದ ನೀವೂ ಸುದರ್ಶನಚಕ್ರದಿಂದ ತಪ್ತಮುದ್ರಾಂಕಿತರಾಗಿ ಶ್ರೀಮನ್ನಾರಾಯಣನ ಚರಣಾರವಿಂದಗಳನ್ನು ಶರಣು ಹೊಂದಿರಿ." ಎಂದು ಮುನಿಗಳು ನಾರದರಿಂದ ಉಪದೇಶಿಸಲ್ಪಟ್ಟವರಾಗಿ, ಅದೇ ರೀತಿಯಲ್ಲಿ ದ್ವಯಮಂತ್ರೋಪದೇಶವನ್ನು ಹೊಂದಿ ಪರಮಪದವನ್ನು ಹೊಂದಿದರು. ಆದ್ದರಿಂದ ಓ ರಾಜನೇ! ನೀನೂ ಸಹ ಶ್ರೀಮನ್ನಾರಾಯಣ ಸಾಯುಜ್ಯವನ್ನು ಹೊಂದಲು ಆಶೆಪಡುವುದರಿಂದ ಶಾಸ್ತ್ರೋಕ್ತವಾಗಿ ದೀಕ್ಷಾವಿಧಿಯನ್ನನುಸರಿಸಿ ಸುದರ್ಶನಚಿಹ್ನೆಯನ್ನು ಧರಿಸಿ ಶ್ರೀಮನ್ನಾರಾಯಣನೇ ಫಲವೆಂದೂ, ಸಾಧನವೆಂದೂ, ನಂಬಿರುವವನಾಗು."

ಪರಾಶರಸಂಹಿತಾಯಾಂ—

"ವಸಿಷ್ಠೋ ಯಾಜ್ಞವಲ್ಕ್ಯಶ್ಚ ಶುಕಶ್ಚೈವ ಬೃಹಸ್ಪತಿಃ
ಶಕ್ತಿರ್ಬೋಧಾಯನೋವ್ಯಾಸೋ ಹಾರೀತೋಹ್ಯಾಶ್ವಲಾಯನಃ |

ಕಾತ್ಯಾಯನಶ್ಶೌನಕಶ್ಚ ಆಪಸ್ತಂಬಾದಯಸ್ತಥಾ
ಸಾತ್ವಿಕಾ ಋಷಯಶ್ಚಾನ್ಯೇ ಋಷಯೋ ಹಾರಿತಾನ್ವಯಾಃ ।
ಭಾರದ್ವಾಜಾದಿ ಮುನಯೋ ಗಾರ್ಗ್ಯಶ್ರೀವತ್ಸಕಾದಯಃ
ಅಂಬರೀಷೋ ಯೌವನಾಶ್ವಶ್ಶಾಂಡಿಲ್ಯಶಠಮರ್ಷಣಃ ।
ಏತೇ ಶುದ್ಧಾಶ್ಚ ಸರ್ವೇ ವೈ ವೇದಮಾರ್ಗಪ್ರವರ್ತಕಾಃ
ಏತದಾಚಾರನಿಷ್ಠಾವೈ ಸರ್ವದಾ ಕಮಲಾಸನ
ತಸ್ಮಾತ್ತ್ವಮೇತದಾಚಾರಂ ನಿತ್ಯಂ ಕುರು ಚತುರ್ಮುಖ ।
ಮತ್ಸಾಯುಜ್ಯಾದಿ ಸಿದ್ಧ್ಯರ್ಥಂ ಸರ್ವಬಂಧವಿಮುಕ್ತಯೇ
ಏತದಾಚಾರನಿಷ್ಠಾಯೇ ಪ್ರಪನ್ನಾಸ್ತೇ ಮಹೋದಯಾಃ ।
ಶ್ರೀಮತ್ಸೇನೇಶವತ್ಸರ್ವೇ ಮತ್ಪ್ರಿಯಾ ನಾತ್ರ ಸಂಶಯಃ
ಅನಂತೋ ವೈನತೇಯಶ್ಚ ತಥಾ ವೈಖಾನಸಾಸ್ತಥಾ ॥
ಏತೇ ಪ್ರಪನ್ನನಿಷ್ಠಾಶ್ಚ ಪಂಚಸಂಸ್ಕಾರಸಂಯುತಾಃ "

ಎಂದರೆ "ಓ ಚತುರ್ಮುಖಾ ! ವಸಿಷ್ಠರು ಯಾಜ್ಞ್ಯವಲ್ಕ್ಯರು ಶುಕರು, ಬೃಹಸ್ಪತಿ, ಶಕ್ತಿ, ಬೋಧಾಯನರು, ವ್ಯಾಸರು, ಹಾರೀತರು, ಆಶ್ವಲಾಯನರು, ಕಾತ್ಯಾಯನರು, ಶೌನಕರು, ಆಪಸ್ತಂಬರು, ಇನ್ನೂ ಇಂಥ ಸತ್ವಗುಣ ಸಂಪನ್ನರಾದ ಹಾರೀತವಂಶೀಯರೂ, ಭಾರದ್ವಾಜಾದಿಗಳೂ, ಗಾರ್ಗ್ಯರೂ, ಶ್ರೀವತ್ಸರೂ, ಅಂಬರೀಷರೂ, ಯೌವ್ವನಾಶ್ವರೂ, ಶಾಂಡಿಲ್ಯರೂ, ಶಠಮರ್ಷಣರೂ, ಇವರೇ ಮೊದಲಾದ ವೇದಮಾರ್ಗ ಪ್ರವತಕರಾದ ಸದಾಚಾರ ಸಂಪನ್ನರಾದವರೆಲ್ಲರೂ ಶಾಸ್ತ್ರೋಕ್ತ ರೀತಿಯಲ್ಲಿ ಚಕ್ರಾಂಕನರಾಗಿ ಮಂತ್ರ ಮಂತ್ರಾರ್ಥವನ್ನು ಹೊಂದಿ ಶ್ರೀಮನ್ನಾರಾಯಣನೇ ಉಪಾಯೋಪೇಯನೆಂದು ನಂಬಿ ಶ್ರೀವಿಷ್ಣು ಸಾಯುಜ್ಯವನ್ನು ಹೊಂದಿರುವರಾದ್ದರಿಂದ ನೀನೂ ಸಹ ಸಕಲಪ್ರಕೃತಿ ಬಂಧವನ್ನು ಬಿಟ್ಟು ಸಾಯುಜ್ಯವನ್ನು ಹೊಂದುವುದಕ್ಕೆ ಈ ಆಚಾರವನ್ನೇ (ವೈಷ್ಣವದೀಕ್ಷೆ) ಅವಲಂಬಿಸು. ಈ ಆಚಾರ ಸಂಪನ್ನರೂ ಉತ್ತಮ ಪ್ರಪನ್ನರೂ ಆದ ಶ್ರೀವಿಷ್ವಕ್ಸೇನಾದಿಗಳಂತೆ ನನಗೆ ಅಧಿಕ ಪ್ರಿಯರೆಂದು ಹೇಳುವುದರಲ್ಲಿ ಸಂಶಯವಿಲ್ಲ. ಹೀಗೆಯೇ

ಅಲ್ಲವೆ ಆದಿಶೇಷರೂ, ಗರುಡಾದಿಗಳೂ, ವೈಖಾನಸರೂ, ಪ್ರಪನ್ನರಾಗಿ ಪಂಚಸಂಸ್ಕಾರವನ್ನು ಹೊಂದಿ ನನಗೆ ಪ್ರಿಯರಾದರು."

ಪರಾಶರ ಸಂಹಿತಾಯಾಂ—

"ಪ್ರಪನ್ನೋ ಯದಿ ವಾ ಶ್ರೇಷ್ಠಃ ಏತದುಕ್ತವಿಧಾನತಃ
ನಿಷೇಕಬ್ರಹ್ಮಮೇಧಾಂತಂ ಪಂಚಸಂಸ್ಕಾರಪೂರ್ವಕಂ ||
ಪ್ರಪನ್ನವೃತ್ತಿಮಾಚಾರಂ ಸ್ವಯಂವ್ಯಕ್ತಸ್ಥಲಾದಿಷು
ಅಗ್ರಹಾರೇ ಪಟ್ಟಣೇ ವಾ ಗೃಹಗ್ರಾಮಾರ್ಚನಾದಿಷು ||
ಆಚರೇದ್ಯೋಥವಾ ವಿಪ್ರ ಸ್ಸ ಗುರುರ್ವೈಷ್ಣವಶ್ಶುಚಿಃ
ಪ್ರಪನ್ನಃ ಪರಮೈಕಾಂತೀ ಸದ್ವಿಜೋ ಬ್ರಾಹ್ಮಣೋತ್ತಮಃ ||
ಸತ್ಯಂಸತ್ಯಂ ಪುನಸ್ಸತ್ಯಂ ಇದಮೇವ ಚತುರ್ಮುಖ
ಆಪಸ್ತಂಬಾ ಯಾಜ್ಞವಲ್ಕ್ಯಸ್ತಥಾ ವಾಜಸನೇಯಕಾಃ ||
ಬೋಧಾಯನಾದ್ಯಾಸ್ಸರ್ವೇಽಪಿ ತಥಾ ವೈಖಾನಸಾದ್ವಿಜಾಃ
ಸಾಮಗಾಃ ಪಾಂಚರಾತ್ರಜ್ಞಾಃ ತಥೈವ ಹ್ಯಾಶ್ವಲಾಯನಾಃ ||
ಏತದಾಚಾರವಿಧಿನಾ ದ್ವಿಜಾದ್ಯಾಃ ಕುರ್ವತೇ ಸದಾ"

"ಓ ಚತುರ್ಮುಖಾ! ಉತ್ತಮನಾದ ಪ್ರಪನ್ನನು ಈ ಸಂಹಿತೆಯಲ್ಲಿ ಹೇಳಿದ ಪ್ರಕಾರ ಪ್ರಪನ್ನನ ಆಚಾರವೆಂದು ನಿರ್ಣಯಿಸಲ್ಪಟ್ಟ ಪಂಚಸಂಸ್ಕಾರಗಳಿಂದ ದೀಕ್ಷಿತರಾಗಿ ಸ್ವಯಂವ್ಯಕ್ತ ಸ್ಥಳಗಳಲ್ಲಾಗಲಿ, ಅಗ್ರಹಾರಗಳಲ್ಲಾಗಲಿ, ಪಟ್ಟಣಗಳಲ್ಲಾಗಲಿ, ಗೃಹಾರ್ಚನಗಳಲ್ಲಾಗಲಿ ಗ್ರಾಮಾರ್ಚನೆಗಳಲ್ಲಾಗಲಿ ಪಂಚಸಂಸ್ಕಾರ ಪೂರ್ವಕವಾಗಿ ನಿಷೇಕ ಮೊದಲಾಗಿ ಬ್ರಹ್ಮಮೇಧಾಂತ ಸಂಸ್ಕಾರದವರಿಗೆ ಆಚರಿಸಿದ್ದೇ ಆದರೆ ಆತನು ಪವಿತ್ರವಾದ ವಿಷ್ಣುಭಕ್ತನಾಗಿ **ಪರಮೈಕಾಂತಿ** ಎಂದು ಕರೆಯಲ್ಪಡುವ ಪ್ರಪನ್ನನಾಗಿ ಉತ್ತಮ ಬ್ರಾಹ್ಮಣನಾಗಿ ಆಚಾರ್ಯ ಸ್ಥಾನವನ್ನು ಅಲಂಕರಿಸುವುದರಲ್ಲಿ ಸಂದೇಹವಿಲ್ಲ. ಈ ಮಾತು ತ್ರಿಕರಣಶುದ್ಧಿಯಾಗಿಯೂ ನಿಜವು. ಆಪಸ್ತಂಬರು, ಯಾಜ್ಞವಲ್ಕ್ಯರು, ವಾಜಸನೇಯರು, ಬೋಧಾಯನರು, ವೈಖಾನಸರು, ಆಶ್ವಲಾಯನರು ಸಾಮವೇದೀಯರು, ಪಾಂಚರಾತ್ರೀಯರು ಇವರೇ ಮೊದಲಾದ

ಯಾವತ್ತು ಜನಗಳೂ ಇದೇ ವಿಧವಾಗಿ ಸರ್ವದಾ ವೈಷ್ಣವದೀಕ್ಷೆಯನ್ನು ಪರಂಪರೆಯಾಗಿ ಆಚರಿಸುತ್ತಿರುವರು."

ವಾಸುದೇವಸ್ಸ್ವಯಂಪೂರ್ವೇ ಶ್ರೀಭೂನೀಳಾದಿಕಾಸ್ತಥಾ
ಶಂಖಚಕ್ರಾಂಕನಂ ದತ್ವಾ ಪ್ರಣವಂ ಸಂಪ್ರಯಚ್ಛತ ||
ಅನಂತಗರುಡಾದೀನಾಂ ವಿಷ್ವಕ್ಸೇನಸ್ಯ ತತ್ತಥಾ
ಚಕ್ರಾದ್ಯೈರಂಕನಂಕೃತ್ವಾ ಪೂರ್ವೋಕ್ತಚತುರಕ್ಷರಂ ||
ಉಪದಿಶ್ಯ ತಥಾ ಬ್ರಹ್ಮನ್ನರನಾರಾಯಣಾಶ್ರಮೇ
ನರಸ್ಯ ತದ್ವತ್ಕೃತ್ವಾ ಚವಸಿಷ್ಠಾದಿಮಹರ್ಷಿಣಾಂ
ವೇದವ್ಯಾಸಸ್ಯ ಭರ್ಗಸ್ಯ ವೈಕುಂಠಪುರವಾಸಿನಾಂ
ಚತುರ್ಮುಖಸ್ಯ ವಾಯೋಶ್ಚ ಸೂರ್ಯಾಚಂದ್ರಮಸೋರಪಿ
ಸ್ವಸ್ಯ ಚಕ್ರಾದಿಕಂ ಕೃತ್ವಾದದೌ ಚ ಚತುರಕ್ಷರೀಂ"

ಪೂರ್ವದಲ್ಲಿ ಶ್ರೀಮನ್ನಾರಾಯಣನು ಶ್ರೀ, ಭೂ, ನೀಳಾದಿಗಳಿಗೂ ಅನಂತ ಗರುಡಾದಿಗಳಿಗೂ ತಾನೇ ಸ್ವಂತವಾಗಿ ಚಕ್ರಾಂಕನವನ್ನು ಮಾಡಿ ಪ್ರಣವಮಂತ್ರೋಪದೇಶವನ್ನು ಮಾಡಿದನು. ಅದಲ್ಲದೆ ಬದರಿಕಾಶ್ರಮದಲ್ಲಿ ನರನಿಗೂ, ವಸಿಷ್ಠಾದಿಮಹರ್ಷಿಗಳಿಗೂ, ವೇದವ್ಯಾಸರು, ಭರ್ಗರು ವೈಕುಂಠವಾಸಿಗಳಿಗೂ ಬ್ರಹ್ಮ ವಾಯು, ಸೂರ್ಯ, ಚಂದ್ರರು, ಇವರಿಗೆಲ್ಲಾ ತನ್ನ ಶಂಖಚಕ್ರದಿಂದ ಪಂಚ ಸಂಸ್ಕಾರ ಮುದ್ರಿತರನ್ನಾಗಿಮಾಡಿ ಮಂತ್ರೋಪದೇಶವನ್ನುಮಾಡಿದನು.

ಶೇಷಸಂಹಿತಾಯಾಂ—

"ನೃಸಿಂಹೋ ಭಗವಾನ್ ಬ್ರಹ್ಮನ್ನಂತರ್ಯಾಮೀ ನೃಕೇಸರೀ
ಭಕ್ತಸಂರಕ್ಷಣಾರ್ಥಾಯ ಲೋಕಸಂರಕ್ಷಣಾಯಚ
ಪ್ರಹ್ಲಾದಾಯ ಸ್ವಭಕ್ತಾಯ ಪ್ರಪನ್ನಾಯಮುಮುಕ್ಷವೇ
ತಪ್ತಚಕ್ರಾಂಕನಂ ಕೃತ್ವಾ ತನ್ಮಂತ್ರಂ ಸಂಪ್ರಯಚ್ಛತಿ"

ಎಂದರೆ, ಸರ್ವಾಂತರ್ಯಾಮಿಯಾದ ಸರ್ವೇಶ್ವರನು ಲೋಕದಲ್ಲಿನ ಭಕ್ತರನ್ನು ಸಂರಕ್ಷಿಸುವುದಕ್ಕಾಗಿ ನೃಸಿಂಹ ರೂಪದಿಂದ ಅವತರಿಸಿ ಹಿರಣ್ಯ

ಕಶ್ಯಪುವನ್ನು ಸಂಹಾರಮಾಡಿ ಶ್ರೀವೈಷ್ಣವೋತ್ತಮನಾದ ಪ್ರಪನ್ನನಾದ ಪ್ರಹ್ಲಾದನಿಗೆ ತಪ್ತಚಕ್ರಾಂಕನವನ್ನುಮಾಡಿ ಪ್ರಸಿದ್ಧವಾದ ಮಂತ್ರರತ್ನ ವನ್ನು ಉಪದೇಶಿಸಿದನು.

ಇದಲ್ಲದೆ ಬ್ರಾಹ್ಮಣಸಾಮಾನ್ಯವೆಲ್ಲಾ ಈ ಪಂಚಸಂಸ್ಕಾರವನ್ನು ಹೊಂದಿಯೇತೀರಬೇಕೆಂಬ ವಿಧಿವಾಕ್ಯವು ಪ್ರತಿಧರ್ಮಶಾಸ್ತ್ರದಲ್ಲೂ ಅನೇಕ ಪ್ರಮಾಣಗಳು ಇರುವುವು. "ಸ್ವಯಂತೀರ್ಣಃ ಪರಾ‌ತಾರಯತಿ" ಎನ್ನುವ ನ್ಯಾಯವನ್ನನುಸರಿಸಿ ಈ ಧರ್ಮಶಾಸ್ತ್ರಕರ್ತರಾದ ಮಹರ್ಷಿಗಳು ತಾವು ಸ್ವಂತವಾಗಿ ಆಚರಿಸಿದೆ ಈ ಧರ್ಮಗಳನ್ನು ಇತರರಿಗೆ ನಿರ್ದೇಶಿಸಲು ಅವಕಾಶವಿಲ್ಲವಾದ್ದರಿಂದಲೂ, ತಾವಾಚರಿಸದ ಧರ್ಮಗಳನ್ನು ಎಷ್ಟೋ ದೊಡ್ಡವರಾಗಿ ಎಷ್ಟು ವಿಧದಲ್ಲಿ ಹೇಳಿದರೂ ಇತರರಿಗೆ ಅವರಲ್ಲಿಯೂ, ಅವರ ಮಾತಿನಲ್ಲೂ ಹೇಗೆ ಪ್ರಾಮಾಣ್ಯವು ಏರ್ಪಡುವುದು ? ಆದ್ದರಿಂದ ಪರಮಪ್ರಾಮಾಣಿಕ ಗ್ರಂಥಗಳಾದ ಸ್ಮೃತ್ಯಾದಿ ಧರ್ಮಶಾಸ್ತ್ರಗಳನ್ನು ರಚಿಸಿದ ಮಹರ್ಷಿಗಳು ಈ ಮಾತುಗಳನ್ನು ತಿಳಿಯದೆಯೇ ಈ ಗ್ರಂಥ ಗಳನ್ನು ಬರೆದರೆಂದು ಹೇಳಲು ಅವಕಾಶವೆಲ್ಲಿರುವುದು ? ಆದ್ದರಿಂದ ಮೋಕ್ಷವನ್ನಪೇಕ್ಷಿಸಿದ ಮಹರ್ಷಿಗಳೆಲ್ಲರೂ ಕೂಡ ಈ ಪಂಚಸಂಸ್ಕಾರ ಗಳನ್ನು ಹೊಂದಿಯೇ ಪರಮಪದವನ್ನು ಸೇರಿದರೆಂದು ನಿಜವಾಗಿ ವಾಚಕರಾದ ಭಾಗವತೋತ್ತಮರು ತಿಳಿಯುವವರಾಗಬೇಕು.

ಇನ್ನೂ ಅನೇಕ ಪಾಂಚರಾತ್ರಪ್ರಮಾಣಗಳನ್ನು ಉದಹರಿಸಲು ಗ್ರಂಥವಿಸ್ತರ ಭಯದಿಂದ ವಿರಮಿಸಿರುವೆವು.

———

## ಮುದ್ರಣಕ್ಕೆ ಸಿದ್ಧವಾಗಿರುವ ಗ್ರಂಥಗಳು

೧. ಊರ್ಧ್ವಪುಣ್ಡ್ರ ನಿರ್ಣಯಃ— ಇದರ ಅರ್ಥ ಅವಶ್ಯಕತೆ ಉಭಯ ಕಲೆಯವರ ಚಿಹ್ನೆಗಳು ಅದರ ಭೇದ, ಆಕಾರ, ವರ್ಣ ಇತ್ಯಾದಿಗಳನ್ನು ಸಪ್ರಮಾಣವಾಗಿ ಸಚಿತ್ರದೊಂದಿಗೆ ವಿಜ್ಞಾನರೀತಿಯಲ್ಲಿ ವಿವರಿಸಿರುವುದು.

೨. ಪಂಚಸಂಸ್ಕಾರ ವಿಧಿಃ ಮತ್ತು ಶ್ರೀಪಾದತೀರ್ಥ— ಇದು ಏನು ? ಇದರ ಅರ್ಥ, ಅಧಿಕಾರಿ ಅನಧಿಕಾರಿಗಳು, ಇದರ ಆವಶ್ಯಕತೆ, ಮುಂತಾದ ವಿಷಯಗಳನ್ನು ಸಪ್ರಮಾಣವಾಗಿ ವಿಜ್ಞಾನರೀತಿಯಿಂದ ಬರೆದಿರುವುದು.

೩. ಉಡುಪುಗಳವಿನ್ಯಾಸ:—ಇದರಲ್ಲಿ ಪುರುಷರು, ಸ್ತ್ರೀಯರು, ಬ್ರಾಹ್ಮಣ ಕ್ಷತ್ರಿಯ, ವೈಶ್ಯ, ಶೂದ್ರರು ಮತ್ತು ಆಶ್ರಮ ಭೇದದಿಂದ ಧರಿಸುವ ರೀತಿ ವಿನ್ಯಾಸಗಳು ಅಲ್ಲದೆ ಆಯಾ ಸಂದರ್ಭಕಾಲದಲ್ಲಿ, ಅಭಿಪ್ರಾಯ ವನ್ನು ಸೂಚಿಸಲು ಧರಿಸುವರೀತಿ ಅದಕ್ಕಾಗಿ ಏರ್ಪಟ್ಟಿರುವ ವರ್ಣ, ಆಕಾರ, ಭೇದ, ವಿನ್ಯಾಸಗಳು ಇತ್ಯಾದಿಗಳನ್ನು ವಿವರವಾಗಿ ಬರೆದಿರುವುದು.

೪. ಹೆಬ್ಬಹರಿದಿನಗಳು:—ಇದರಲ್ಲಿ ಸಂವತ್ಸರಾದಿಯಿಂದ, ಕೊನೆಯ ವರೆಗೆ ನಡೆಸುವ ಹಬ್ಬ ಹರಿದಿನಗಳನ್ನು ಏಕೆ ನಡೆಸಬೇಕು ? ಅದರಭಾವ ಕಾರಣಗಳನ್ನು ವಿವರಿಸಿರುವುದು.

೫. ಶ್ರೀಯತಿರಾಜ ಮಠದ ಗುರುಪರಂಪರೆ

ಇದರಲ್ಲಿ ಶ್ರೀರಾಮಾನುಜಾಚಾರ್ಯರಿಂದ ಹಿಡಿದು ಈಗಿನ ಜೀಯರು ಸ್ವಾಮಿಗಳ ವರೆಗಿನ ಆಚಾರ್ಯರ ಚರಿತ್ರೆಯನ್ನು ಬರೆದಿರುವುದು ಅಲ್ಲದೆ ದೇವಸ್ಥಾನದ ಅಗ್ರತೀರ್ಥಮರ್ಯಾದೆ ಸರ್ವಾಧಿಕಾರ, ಕೈಂಕರ್ಯಾದಿ ವಿಚಾರಗಳನ್ನೂ ವಿವರವಾಗಿ ಶಾಸನಗಳೊಂದಿಗೆ ಬರೆದಿರುವುದು.

೬. ೭೪ ಜನ ಸಿಂಹಾಸನಾಧಿಪತಿಗಳು:—ಶ್ರೀರಾಮಾನುಜಾಚಾರ್ಯರಿಂದ ಏರ್ಪಡಿಸಲ್ಪಟ್ಟ ೭೪ ಜನ, ಸಿಂಹಾಸನಾಧಿಪತಿ ಆಚಾರ್ಯಪುರುಷರುಗಳ ವಿಶದವಾದ ಪೂರ್ವಚರಿತ್ರೆ, ಮತ್ತು ವಂಶವೃಕ್ಷ ಇವುಗಳು ಬರೆಯಲ್ಪಟ್ಟಿವೆ.